MADRAS UNIVERSITY KANARESE SERIES No. 3

Oriental
Research Institute Publication

# ABHIDHANA VASTHU KOSHA

BY

NAGAVARMA

ನಾಗವರ್ಮ ಕೃತಮಪ್ಪ

# ಅಭಿಧಾನ ವಸ್ತುಕೋಶಂ

EDITED BY

A. VENKATA RAU, B.A., L.T., *Senior Lecturer*

AND

PANDIT H SESHA AYYANGAR, *Junior Lecturer*

Institute of Oriental Research
University of Madras



UNIVERSITY OF MADRAS

1933

**Price Rs. 3-8-0**

# ಮುನ್ನುಡಿ

ಕರ್ಣಾಟಕ ಕವಿಚರಿತೆಯನ್ನು ಬರೆದಿರುವ, ಮ॥ ರಾ॥ ರಾವ್‌ಬಹದೂರ್ ಆರ್. ನರಸಿಂಹಾಚಾರ್ಯರವರು "ನಾಗವರ್ಮ" ಎಂಬ ಹೆಸರಿನ ಕವಿಗಳ ವಿಷಯವನ್ನು ವಿಮರ್ಶಿಸುವ ಸಂದರ್ಭದಲ್ಲಿ ಈ ಹೆಸರಿನ ಕವಿಗಳು ಇಬ್ಬರೆಂದೂ, ಕ್ರಿ ಶ ೯೯೦ (ಶಕ-೯೧೨) ರಲ್ಲಿದ್ದ "ನಾಗವರ್ಮ" ನೆಂಬವನು "ಕನ್ನಡ ಕಾದಂಬರಿ," "ಛಂದೋಂಬುಧಿ" ಎಂಬೆರಡು ಗ್ರಂಥಗಳನ್ನು ಬರೆದವನೆಂದೂ, ಕ್ರಿ. ಶ. ೧೧೪೫ (ಶಕ ೧೦೬೭) ರಲ್ಲಿದ್ದ ಎರಡನೆಯ ನಾಗವರ್ಮ (ಪಂಡಿತ ನಾಗವರ್ಮ)ನು "ವಸ್ತುಕೋಶ," "ಕಾವ್ಯಾವಲೋಕನ" "ಛಂದೋವಿಚಿತಿ," ಎಂಬ ಗ್ರಂಥಗಳನ್ನು ಬರೆದವನೆಂದೂ ಚರ್ಚಿಸಿ ತಮಗೆ ಉಪಲಬ್ಧವಾದ ಕಾರಣಗಳನ್ನಿತ್ತು ಸಿದ್ಧಾಂತಪಡಿಸಿ ಈ ಎರಡನೆಯ ನಾಗವರ್ಮನ "ಛಂದೋವಿಚಿತಿ" ಯೆಂಬ ಗ್ರಂಥವು ಉಪಲಬ್ಧವಾಗಿಲ್ಲವೆಂದೂ ಬರೆದಿರುವರು

ತಾತ್ಕಾಲಿಕವಾಗಿ ಉಪಲಬ್ಧವಾಗಿರುವ ಈತನ ಎರಡು ಗ್ರಂಥಗಳಲ್ಲಿ ಕಾವ್ಯಾವಲೋಕನವು, ಮೈಸೂರು ಶಾಸನದ ಇಲಾಖೆಯಿಂದ ಬಹುಕಾಲದ ಹಿಂದೆಯೇ ಮುದ್ರಿತವಾಗಿ ಪ್ರಕಟಗೊಂಡು ಕನ್ನಡಿಗರ ವಿಶೇಷಾದರಕ್ಕೆ ಪಾತ್ರವಾಗಿರುವುದು ಇದರಂತೆಯೇ ವಸ್ತುಕೋಶವೂ ಕನ್ನಡಿಗರ ಉಪಯೋಗಕ್ಕೆ ಬರಬೇಕೆಂಬುದೇ ಈ ಗ್ರಂಥದ ಮುದ್ರಣೋದ್ಯೋಗದ ಮುಖ್ಯೋದ್ದೇಶವು.

ಪ್ರಕೃತದಲ್ಲಿ ಈ ಗ್ರಂಥವು ಎರಡು ಹಸ್ತಲಿಖಿತಪ್ರತಿಗಳ ಆಧಾರದಿಂದ ಮುದ್ರಿತವಾಗಿರುವುದು. ಇವುಗಳಲ್ಲಿ ಒಂದನೆಯದು ಮೈಸೂರು ಶಾಸನದ ಇಲಾಖೆಯಲ್ಲಿ ಪಂಡಿತ ಪದವಿಯನ್ನಲಂಕರಿಸಿದ್ದು ಈಗ ವಿಶ್ರಾಂತಿ ಸುಖವನ್ನನುಭವಿಸುತ್ತಿರುವ ಮ॥ ರಾ॥ ಪದ್ಮರಾಜ ಪಂಡಿತರಲ್ಲಿದ್ದ ಕಾಗದದ ಪ್ರತಿಯ ಪ್ರತಿಬಿಂಬರೂಪವಾದ ಕಾಗದದ ಪ್ರತಿಯು. ಇದನ್ನು ಇಲ್ಲಿಯ ವ್ಯವಹಾರಕ್ಕಾಗಿ "ಕ" ಪ್ರತಿಯೆಂದು ಕರೆಯ ಬಹುದು ಎರಡನೆಯದು ಉತ್ತರ ಹಿಂದುಸ್ಥಾನದ "ಆರಾ" ಎಂಬಲ್ಲಿರುವ ಜೈನಸೆಂಟ್ರಲ್ ಲೈಬ್ರರಿಯನ್ನರಾದ ಮ॥ ರಾ॥ ಕೆ. ಭುಜಬಲಿಶಾಸ್ತ್ರಿಗಳವರು ಕಳುಹಿಸಿಕೊಟ್ಟ ತಾಳಪತ್ರಾತ್ಮಕವಾದ ಪ್ರತಿಯು. ಇದಕ್ಕೆ "ಖ" ಎಂಬ ಸಂಜ್ಞೆಯನ್ನು ಕೊಟ್ಟಿದೆ.

ಇವೆರಡು ಪ್ರತಿಗಳಲ್ಲಿಯೂ, ಗ್ರಂಥಲೋಪ ಗ್ರಂಥಪಾತಗಳೂ, ಲೇಖಕ ಭ್ರಮ ಪ್ರಮಾದಾದಿಗಳಿಂದ ಒದಗಬಹುದಾದ ಅಶುದ್ಧಗಳೂ ಹೇರಳವಾಗಿದ್ದು ಶುದ್ಧಪಾಠವುಳ್ಳ ಪದ್ಯಗಳು ಒಂದೆರಡಾದರೂ ಇಲ್ಲವೆನ್ನುವುದು ಅತಿಶಯೋಕ್ತಿಯಾಗಲಾರದು ಅಲ್ಲದೆ "ಕ" ಪ್ರತಿಯ ಗ್ರಂಥಪಾತಸ್ಥಳಗಳನ್ನು ಸೂಕ್ಷ್ಮದೃಷ್ಟಿಯಿಂದ ಪರಿಶೀಲಿಸಿ ನೋಡುವುದಾದರೆ ಇದು "ಖ" ಪ್ರತಿಯ ಪುತ್ರಿಕೆಯೆಂದಾಗಲಿ, ಪುತ್ರಿಕೆಯ ಪುತ್ರಿಕೆಯೆಂದಾಗಲಿ ತೀರ್ಮಾನಿಸಲು ಯಾವಬಗೆಯ ಸಂಶಯವೂ ಇರಲಾರದು ಅಂತಹ ಸ್ಥಳಗಳಲ್ಲಿ ಒಂದನ್ನು ಮಾತ್ರ ಇಲ್ಲಿ ವಿವರಿಸುವುದು ಅಪ್ರಕೃತವಾಗಲಾರದು. "ಕನ್ನೆ ಕುಮಾರಿಕೆ ತಾನಗ್ನಿಕೆ ಗೌರಿಯೆಂಬಳಕ್ಕು ಮದಳ್ವಂ। ಕಾಖ್ಯವರಂಗುಪಯಂತೃ ವಲ್ಲಭಂ ಭರ್ತೃ ಪತಿಪ್ರಿಯನೆನಿವುದಱಿಗೆ ಮನ್ನಭಿಧಾನಂ" ಇದು "ಕ" ಪ್ರತಿಯ ಪಾಠವು, "ಖ" ಪ್ರತಿಯಲ್ಲಿ ೧೩೭ ನೆಯ ತಾಳೆ ಪತ್ರದ ಐದನೆಯ ಪಙ್ತಿಯ ಕೊನೆಯಲ್ಲಿ ಮೇಲಣ ಪದ್ಯಭಾಗವು "ಮದಳ್ವಂ" (ಮವಳ್ಸಂ) ಎಂದು ಮುಗಿದು ಮುಂದಣ ಭಾಗವಾದ "ಪನ್ನರುತು" ಎಂದು ಆರಂಭವಾಗುವ

ಪಙ್ತಿಯ ಓಲೆಯ ಆದಿಯಲ್ಲಿ ಮೇಲಣ ಪಙ್ತಿಯ "ಯ್ಯ"[1] ಎಂಬ ಅಕ್ಷರದ ಎತ್ವವು ಇರುವುದರಿಂದ ಪಙ್ತಿಯೂ ಆ ಓಲೆಯ ಮಧ್ಯದಿಂದ ಆರಂಭವಾಗಿರುವಕಾರಣದ "ಪನ್ನರುತು" ಎಂಬ ಈ ಪಙ್ತಿಯೇ ಥಟ್ಟನೆ ಸ್ಫೂರ್ತಿಗೆ ಬರದೆ ಅದರ ಮುಂದಣ ಪಙ್ತಿಯಲ್ಲಿರುವ "ಕಾಬ್ಯವರಂ" ಎಂಬ ಭಾಗವೇ ಥಟ್ಟನೆ ಕಂಡು ಬರುವುದು. ಆದುದರಿಂದ ಈ ಪ್ರತಿಯನ್ನು ನೋಡಿ ಬರೆದವನು "ಮದಳ್ವಂ ಕಾಬ್ಯವರಂ" ಎಂದು ನಿರಂತರವಾಗಿ ಬರೆಯಲು ಅವಕಾಶವುಂಟು "ಕ" ಪ್ರತಿಯಲ್ಲಿ ಈ ಬಗೆಯ ಆನುಪೂರ್ವಿಯೂ ಕಂಡು ಬರುವುದರಿಂದ, ಇದು "ಖ" ಪ್ರತಿಯ ಪುತ್ರಿಕೆ, ಅಥವಾ ಪುತ್ರಿಕೆಯ ಪುತ್ರಿಕೆ ಎಂಬುದರಲ್ಲಿ ಯಾವ ಅಭ್ಯಂತರವೂ ಇಲ್ಲ. ಈ ಕಾರಣದಿಂದಲೇ ಇವೆರಡು ಪ್ರತಿಗಳಿಗೂ ಲೇಖಕ ಪ್ರಮಾದದಿಂದ ಸಂಭವಿಸ ಬಹುದಾದ ಅಕ್ಷರ ಸ್ಖಾಲಿತ್ಯಾದಿ ಕೆಲವು ದೋಷಗಳನ್ನು ಬಿಟ್ಟರೆ ಮತ್ತಾವ ಬಗೆಯ ವ್ಯತ್ಯಾಸವೂ ಕಂಡುಬರುವುದಿಲ್ಲ. ಗ್ರಂಥವು ಇಷ್ಟು ಅಶುದ್ಧವಾಗಿದ್ದರೂ, ಮಾತೃಕಾಂತರಗಳ ಅಭಾವದಲ್ಲಿ ದೊರೆತ ಈ ೨ ಪ್ರತಿಗಳೂ ಕಾರಣಾಂತರಗಳಿಂದ ನಷ್ಟವಾಗುವುದಾದರೂ, ಹಾಗೆ ನಷ್ಟವಾಗದೆ ಲೈಬ್ರರಿಗಳಲ್ಲೇ ಸ್ವಸ್ವರೂಪದಿಂದ ಇರುವುದಾದರೂ, ಕನ್ನಡ ಭಾಷಾ ಪ್ರಪಂಚದಲ್ಲಿ ಮೊತ್ತ ಮೊದಲ ವಿಶಾಲವಾದ ನಿಘಂಟುವೆನಿಸಿದ ಇದರ ಪ್ರಯೋಜನವು ಸ್ವಲ್ಪಮಟ್ಟಿಗೂ ಕನ್ನಡಿಗರಿಗೆ ದೊರಕದೇ ಹೋಗಬಹುದಾದ ಸಂಭವವನ್ನು ಆಶಂಕಿಸಿ ಸಾಧನಸಂಪತ್ತಿಗಳ ಕೊರತೆಯಿದ್ದರೂ ಇದರ ಮುದ್ರಣೋದ್ಯೋಗವನ್ನು ಕೈಗೊಂಡು ದಾಯಿತು.

ಈ ಕವಿಯು ತನ್ನ ಈ ಗ್ರಂಥದ ಪೀಠಿಕೆಯಲ್ಲಿ ತಾನು ಸಂಗ್ರಹಿಸಿರುವುದಾಗಿ ಹೇಳುವ ಸಂಸ್ಕೃತ ಭಾಷಾತ್ಮಕವಾದ ಹಲಾಯುಧನ ಅಭಿಧಾನ ರತ್ನಮಾಲೆ, ಅಮರಸಿಂಹನ ನಾಮಲಿಂಗಾನುಶಾಸನ, ವರರುಚಿಯಕೋಶ, ಶಾಶ್ವತ, ಧನಂಜಯಕೋಶ, ವಾಗುರಿಕೋಶ,[2] ಇವುಗಳು ಗ್ರಂಥಶೋಧನೆಯಲ್ಲಿ ವಿಶೇಷ ಸಹಾಯವನ್ನೊದಗಿಸಿರುವುವು. ಅಲ್ಲದೆ ಈ ವಸ್ತುಕೋಶವನ್ನೇ ಆದರ್ಶವಾಗಿಟ್ಟುಕೊಂಡು ಭಾಮಿನೀಷಟ್ಪದಿಯಲ್ಲಿ ಬರೆದಿರುವ "ಕರ್ಣಾಟಕ ಮಂಗರಾಜ ನಿಘಂಟು"ವೂ ಹೇಮಚಂದ್ರನ ಸಂಸ್ಕೃತ ಭಾಷಾತ್ಮಕವಾದ ಹೈಮಕೋಶವೂ ಅಲ್ಲಲ್ಲಿ ತಕ್ಕಮಟ್ಟಿಗೆ ಸಹಾಯವನ್ನು ಮಾಡಿವೆ

ಮೇಲೆ ಹೇಳಿರುವ ನಿಘಂಟುಗಳ ಪರ್ಯಾಲೋಚನೆಯಿಂದ ಗ್ರಂಥವನ್ನು ಪರಿಶೋಧಿಸಿ ಪ್ರಕೃತ ಸ್ಥಿಯಲ್ಲಿ ಮುದ್ರಿಸಲಾಯಿತು

---

[1] ಹಳಗನ್ನಡಲಿಪಿಗಳಲ್ಲಿ ಎತ್ವವು ಯಕಾರದ ಒತ್ತಿನ ರೂಪದಲ್ಲಿರುವುದು. ಇದರ ಪರಿಮಾಣವು ಅಕ್ಷರಪರಿಮಾಣಕ್ಕೆ ಎರಡು ಮೂರರಷ್ಟಿರುವುದು. ಹೀಗೆಯೇ ಅಕ್ಷರಗಳ ಒತ್ತುಗಳೂ ಅಕ್ಷರಗಳ ಪ್ರಮಾಣವನ್ನು ಮೀರಿರುವುವು. ಇದರಿಂದ ಹಲವು ಶಾಸನಗಳಲ್ಲಿ ಅಕ್ಷರ ಮತ್ತು ಪಙ್ತಿಗಳ ಭ್ರಾಂತಿಗಳು ವಿಶೇಷವಾಗಿ ತೋರಿಬರುವುವು.

[2] ಈ ಕೋಶವು ಸಂಪೂರ್ಣವಾಗಿ ಗ್ರಂಥರೂಪದಲ್ಲಿ ದೊರಕಿಲ್ಲ ಹಲವು ಮಂದಿ ವ್ಯಾಖ್ಯಾಕಾರರು ಅಲ್ಲಲ್ಲೇ ಕೆಲವು ವಾಕ್ಯಗಳನ್ನು ಉದಹರಿಸಿರುವರು. ನಮಗೆ ದೊರಕಿದ ಕೆಲವು ವಾಕ್ಯಗಳನ್ನು ಸಂಗ್ರಹಿಸಿ ಈ ಗ್ರಂಥದ ಶೋಧನೆಯಲ್ಲಿ ಉಪಯೋಗಿಸಿದೆ

ಉದಾ—ಶಕ್ಲೋವದನ್ಯಃ ಪ್ರಿಯವಾಕ್ ವದಾನ್ಯೋ ದಾನಶೀಲಕಃ॥ ವಾಗುರಿಃ.

ಗ್ರಂಥ ಶರೀರವೆಲ್ಲವೂ ಮುದ್ರಿತವಾದ ಬಳಿಕ ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿ ಎಡಿಟೋರಿಯಲ್ ಪಂಡಿತ ಪದವಿಯಲ್ಲಿರುವ ಡಿ ಎಲ್. ನರಸಿಂಹಾಚಾರ್; ಎಂ. ಎ. ಯವರಲ್ಲಿದ್ದ ಟೀಕೆಯೊಡಗೂಡಿದ ತಾಳೆಪತ್ರದ ಪ್ರತಿಯೊಂದು ದೊರಕಿತು.[1] ಇದನ್ನು "ಗ" ಪ್ರತಿಯೆಂದು ಕರೆಯ ಬಹುದು ಈ ಪ್ರತಿಯಲ್ಲಿಯೂ ಗ್ರಂಥಲೋಪ, ಗ್ರಂಥಪಾತ, ಅಕ್ಷರ ಸ್ಖಾಲಿತ್ಯಾದಿ ದೋಷ ಗಳು "ಕ" "ಖ" ಪ್ರತಿಗಳಿಗಿಂತ ಹೇರಳವಾಗಿದ್ದರೂ ಪ್ರಕೃತ ಮುದ್ರಿತವಾಗಿರುವ ಗ್ರಂಥದಲ್ಲಿ ರುವ ಲೋಪಗಳನ್ನು ಸರಿಪಡಿಸಿಕೊಳ್ಳತಕ್ಕ ಸುಯೋಗ (ದ ಲಾಭವು) ವು ಇದರಿಂದ ಲಭಿಸಿದುದು ತುಂಬಾ ಶ್ಲಾಘನೀಯವಾದುದೇ ಸರಿ. ಈ ಗ್ರಂಥದ ಸ್ವರೂಪವನ್ನು ವಾಚಕರ ಅವಗಾಹನೆಗೆ ತರ ಬೇಕೆಂಬ ಉದ್ದೇಶದಿಂದ ಇದರ ಸಂಪೂರ್ಣ ಪಾಠವನ್ನು ಎರಡನೆಯ ಪರಿಶಿಷ್ಟವಾಗಿ ಕೊಟ್ಟಿದೆ. ನಿಘಂಟುವಿನ ಅಂಗವಾದ ಶಬ್ದಗಳ ಅಕಾರಾದ್ಯನುಕ್ರಮಣಿಕೆಯ ಪಟ್ಟಿಯೇ ಇದರ ಒಂದನೆಯ ಪರಿಶಿಷ್ಟವು. ನಿಘಂಟುವಿನ ಸಂಪೂರ್ಣಪ್ರಯೋಜನವನ್ನು ಪಡೆಯಲು ಟೀಕೆಯು ಅತ್ಯಾವಶ್ಯಕ ವಾಗಿರುವುದರಿಂದ ಇದರ ಟೀಕೆಯನ್ನು ಕಾರಣಾಂತರಗಳಿಂದ ಇದರೊಡನೆ ಸೇರಿಸಿ ಮುದ್ರಿಸಲು ಅವಕಾಶವಾಗಲಿಲ್ಲ ಕಾಲಕ್ರಮದಲ್ಲಿ ಇದರ ಅನುಬಂಧ ಗ್ರಂಥವಾಗಿ (ಸಪ್ಲಿಮೆಂಟ್ ವಾಲ್ಯುಂ) ಮುದ್ರಿತವಾಗುವ ಆಶಂಸೆಯುಂಟು.

ಪ್ರಕೃತ ಮುದ್ರಣದಲ್ಲಿ ಮಾತೃಕಾಂತರಗಳ ಅಭಾವದಿಂದ ಹಲವು ಸ್ಖಾಲಿತ್ಯಗಳಿರಬಹು ದಾದರೂ ಗುಣಜ್ಞರಾದ ಪಂಡಿತರು 'ನೀರಕ್ಷೀರನ್ಯಾಯ' ವನ್ನನುಸರಿಸಿ ಗುಣಲೇಶಸ್ವೀಕಾರ ದಿಂದ ಈ ನಿಘಂಟುವಿನ ಉಪಯೋಗವನ್ನು ಪಡೆಯುವುದಾದರೆ ನಮ್ಮಶ್ರಮವು ಸಾರ್ಥಕವಾಗುವು ದೆಂಬುದೇ ಸಹೃದಯರಲ್ಲಿ ನಮ್ಮ ಸವಿನಯ ಪ್ರಾರ್ಥನೆಯು.

---

## ಗ್ರಂಥ ಸ್ವರೂಪ ನಿರೂಪಣಂ

ನಿರತಿಶಯಾನಂದರೂಪವಾದ ಕಾವ್ಯರಸಾಸ್ವಾದವು ಪರಬ್ರಹ್ಮಸ್ವಾದಸೋದರವೆಂಬುದು ನಕಲ ತಾಂತ್ರಿಕ ಸಿದ್ಧಾಂತವು. ಈ ಕಾವ್ಯ ಲಕ್ಷಣವನ್ನು ಆಲಂಕಾರಿಕರಲ್ಲಿ ಹಲವರು ಹಲವು ವಿಧ ವಾಗಿ ನಿರೂಪಣ ಮಾಡಿದ್ದರೂ ಪರ್ಯವಸಾನದಲ್ಲಿ ಕಾವ್ಯ ಶರೀರವು ಶಬ್ದಾರ್ಥನಿಚಿತವಾದು ದೆಂಬುದನ್ನು ಯಾರೂ ಪ್ರತಿಭಟಿಸುವುದಿಲ್ಲ. ಕರ್ಣಾಟಕಲಾಕ್ಷಣಿಕರಲ್ಲಿ ಮೊತ್ತಮೊದಲಿಗನಾದ ಕವಿರಾಜ ಮಾರ್ಗಕರ್ತೃವು—ಕಾವ್ಯ ಲಕ್ಷಣವನ್ನು

ಕವಿಭಾವ ಕೃತಾನೇಕ ।
ಪ್ರವಿಭಾಗ ವಿವಿಕ್ತ ಸೂಕ್ತ ಮಾರ್ಗಂ ಕಾವ್ಯಂ ॥
ಸವಿಶೇಷ ಶಬ್ದ ರಚನಂ ।

ಎಂದೂ, ಕಾವ್ಯಾವಲೋಕನ ಕರ್ತೃವಾದ ನಾಗವರ್ಮನು—

ಇರೆ ಶಬ್ದಾರ್ಥಂಗಳ್ ತ ।
ತ್ಪರತೆಯಿನದು ಕಾವ್ಯಂ......... ॥

---

[1] ಇದರಲ್ಲಿ ನಾನಾರ್ಥವರ್ಗದಲ್ಲಿ ೫೦ ಪದ್ಯಗಳು ಮಾತ್ರವಿವೆ. ಗ್ರಂಥಾಂತ್ಯದ ಪ್ರಶಸ್ತಿ ಪದ್ಯ ಗಳೂ, ಗದ್ಯವೂ ಇಲ್ಲ. ಕೊನೆಯಲ್ಲಿ ನಾಗವರ್ಮ ನಿಘಂಟು ಸಮಾಪ್ತಂ- ಎಂದಿದೆ.

ಎಂದೂ ನಿರೂಪಿಸಿರುವರು. ಇಂತಹ ಶಬ್ದಾರ್ಥಗಳ ಪ್ರತ್ಯಯವನ್ನುಂಟುಮಾಡುವ ವ್ಯಾಕರಣಾದಿ [1]ಸಾಧನಗಳಲ್ಲಿ ನಿಘಂಟುವೂ ಒಂದೆಂದು ತಾಂತ್ರಿಕರಿಂದ ಪರಿಗಣಿತವಾಗಿದೆ ನಿಘಂಟು ವೆಂಬುದು, ವ್ಯವಹಾರ ಯೋಗ್ಯವಾದ ಭಿನ್ನಾರ್ಥಕ, ಸಮಾನಾರ್ಥಕ, ನಾಮಪದಗಳ [2](ಪ್ರಾತಿಪದಿಕಗಳ) ವಾಚ್ಯವಾಚಕ ಭಾವವನ್ನು ಪರ್ಯಾಯಪದಗಳೊಡನೆ ತಿಳಿಸುವ ಗ್ರಂಥವೆಂದು ಲಕ್ಷಣಕಾರರು ನಿರೂಪಿಸಿರುವರು. ಪ್ರಕೃತ ಗ್ರಂಥವು ಕರ್ಣಾಟಕ ಭಾಷೆಯಲ್ಲಿ ಛಂದೋರೂಪವಾಗಿ ಕನ್ನಡಕಬ್ಬಗಳಲ್ಲಿ ಪ್ರಯೋಗಿಸಬಹುದಾದ ಸಮಸಂಸ್ಕೃತಶಬ್ದಗಳ ಸ್ವರೂಪವನ್ನು ತಿಳಿಸುವ ಕೋಶವಾಗಿದೆ.[3] ಇದರಲ್ಲಿ ಸಮಸಂಸ್ಕೃತಶಬ್ದಗಳು ಮಾತ್ರವಲ್ಲದೆ ಅಲ್ಲಲ್ಲೇ ಹಲವು ದೇಶ್ಯ ಶಬ್ದಗಳೂ ದೊರಕುವುವು. ಅಭಿಧಾನಕೋಶದ ಪ್ರಯೋಜನವನ್ನು,

ಪುದಿದ ಮನಸ್ತಮಮಂ ಬಿತೆ ।
ಬೆದಱಿ ಸದರ್ಥಪ್ರಕಾಶಮಂ ಮಾಡುಗುಮ ॥
ಪ್ಪುದಱಿಂ ಸಮಸ್ತವಿದ್ಯಾ ।
ಪ್ರದೀಪ ಮಭಿಧಾನಕೋಶ ಮಲ್ಲದೆ ಪೆಱದೇಂ ॥

ಎಂದು ಈ ಗ್ರಂಥಕರ್ತನೇ ತನ್ನ ಗ್ರಂಥದ ಪೀಠಿಕೆಯಲ್ಲಿ ಹೇಳಿರುವನು.

ಇದಕ್ಕೆ "ಅಭಿಧಾ[ನ] ವಸ್ತುಕೋಶ'ವೆಂದು ಹೆಸರು ಗ್ರಂಥಕರ್ತೃವು ಪ್ರಕೃತ ಗ್ರಂಥಕ್ಕೆ ಹೆಸರನ್ನು ಕಲ್ಪಿಸುವಾಗ ತನಗೆ ವಿಶೇಷಾಭಿನಂದನೀಯವಾದ ಭಟ್ಟ ಹಲಾಯುಧನ "ಅಭಿಧಾನರತ್ನ

---

[1] ಶಕ್ತಿಗ್ರಹಂ ವ್ಯಾಕರಣೋಪಮಾನ ಕೋಶಾಪ್ತವಾಕ್ಯಾದ್ವ್ಯವಹಾರತಶ್ಚ ॥
ವಾಕ್ಯಸ್ಯ ಶೇಷಾದ್ವಿವೃತೇರ್ವದನ್ತಿ ಸಾನ್ನಿಧ್ಯತಸ್ಸಿದ್ಧಪದಸ್ಯ ವೃದ್ಧಾಃ ॥

[2] ಸಂಸ್ಕೃತದಲ್ಲಿ ಈ ಬಗೆಯ ನಿಘಂಟುಗಳು ನೂರಾರಿರುವುವು. ಧಾತುಗಳ ಅರ್ಥವನ್ನು ತಿಳಿಸುವ ಧಾತು ಪಾಠವು ವ್ಯಾಕರಣ ಶಾಸ್ತ್ರದ ಅಂಗವಾಗಿರುವುದರಿಂದ ಕ್ರಿಯಾ ನಿಘಂಟುವಿನ ಆವಶ್ಯಕತೆಯೇ ಸಂಸ್ಕೃತದಲ್ಲಿಲ್ಲ. ಆದರೂ ಸಂಸ್ಕೃತದಲ್ಲಿ ಒಂದೆರಡು ಕ್ರಿಯಾ ನಿಘಂಟುಗಳೂ ಇರುವುವು. ಮೇಲೆ ಹೇಳಿರುವ ಲಕ್ಷಣವಾದರೋ ಪ್ರಾಚುರ್ಯಪರವು. ಶಬ್ದಮಣಿ ದರ್ಪಣಕಾರನು-ಕ್ರಿಯಾಪದಗಳಿಗೆ ಸಮಾಸವಿದ್ದರೂ, ಸಮಾಸಲಕ್ಷಣವನ್ನು ಹೇಳುವಾಗ ಪ್ರಾಚುರ್ಯ ಪ್ರಯೋಗವನ್ನನುಸರಿಸಿ— "ನಾಮಪದಮದರ್ಥಾನುಗಮಾಗೆಱಗೆ ಸಮಾಸಂ" ಎಂದು ಹೇಳಿರುವುದು ಪ್ರಕೃತ ವಿಷಯ ಸಾಧನೆಗೆ ಅನುಕೂಲವಾಗಿರುವುದು. ಸಂಸ್ಕೃತದಲ್ಲಿಯೂ ಈ ಬಗೆಯ ಸಮಾಸ ಲಕ್ಷಣಗಳಿರುವುವು. ಒಬ್ಬ ಸಂಸ್ಕೃತ ವೈಯಾಕರಣನು - "ನಾಮ್ನಾಂ ಸಮಾಸಸ್ಸಂಗತಾರ್ಥಃ" ಎಂದು ಸೂತ್ರಿಸಿರುವನು.

[3] ಕರಮೆ ಜಡಮತಿಯುಮ ಮಱವಂ ।
ತಿರೆ ಕನ್ನಡದಿಂ ಜಲಕ್ಕನಾಗಿರ್ಪನೆಗಂ ॥
ವಿರಚಿಸಿದಂ............ ।
... ..... .. ................॥ ೪ ॥

[4] (ಅ) ಇದುಸಮಸ್ತ.... ....ಮಪ್ಪ ಅಭಿಧಾನಕೋಶದೊಳ್ ಏಕಾರ್ಥ ಕಾಂಡಂ ಪ್ರಥಮಂ

(ಕಾಂಡಗಳ ಅಂತ್ಯಗದ್ಯ)

(ಇ) ಛಂದೋವಿಚಿತಿ ಯಲಂಕೃತಿ ।
ಸಂದಭಿಧಾ[ವಸ್ತು] ಕೋಶಮೆಂಬಿವು...... ॥

ಕಾವ್ಯಾವಲೋಕನಂ—

ಮಾಲಾ” ಎಂಬ ಕೋಶದ ಹೆಸರೇ ಬುದ್ಧಿಯಲ್ಲಿ ಸನ್ನಿಹಿತವಾಗಿದ್ದುದರಿಂದ, “ಅಭಿಧಾನ ವಸ್ತು ಕೋಶ ವೆಂಬ ಹೆಸರನ್ನೇ ತನ್ನ ಈ ಗ್ರಂಥಕ್ಕೂ ಕೊಟ್ಟಿರುವಂತೆ ಭಾಸವಾಗುವುದು. ವಸ್ತುಕೋಶ ವೆಂದರೆ ಪದಾರ್ಥಗಳನ್ನು ಸಂಗ್ರಹಿಸಿಟ್ಟಿರುವ ಎಡೆ ಪ್ರಕೃತವಾದ ಅಭಿಧಾನವಸ್ತುಕೋಶವೆಂಬ ಈ ಶಬ್ದಕ್ಕೆ (ಅಭಿಧಾನಗಳು) ಪದಾರ್ಥಗಳ ಸ್ವರೂಪವನ್ನು ತಿಳಿಸುವ ಶಬ್ದಗಳನ್ನು ಸಂಗ್ರಹಿಸಿರುವ ಗ್ರಂಥವೆಂದು ತಾತ್ಪರ್ಯವು

ಈ ಕೋಶವು ಕಂದವೃತ್ತಗಳಲ್ಲಿ ಬರೆಯಲ್ಪಟ್ಟಿದೆ ಕಂದಗಳೇ ವಿಶೇಷವಾಗಿರುವುವು ಕರ್ಣಾಟಕಭಾಷೆಯಲ್ಲಿ ಪ್ರಸಿದ್ಧವಾಗಿರುವ, ಸಂಸ್ಕೃತ ವೃತ್ತಜಾತಿಗಳಲ್ಲಿ ಉತ್ಪಲಮಾಲೆ, ಶಾರ್ದೂಲ, ಸ್ರಗ್ಧರೆ, ಮಹಾಸ್ರಗ್ಧರೆ, ಮತ್ತೇಭ, ಚಂಪಕಮಾಲೆ, ಮಾಲಿನಿ, ಮಂದಾಕ್ರಾಂತ, ವಸಂತತಿಲಕ, ಶಾಲಿನಿ, ಶಿಖರಿಣಿ, ಹರಿಣಿ, ಪ್ರಹರ್ಷಿಣಿ, ವಂಶಸ್ಥ, ಉಪೇಂದ್ರವಜ್ರ, ಎಂಬ ಸಮವೃತ್ತಗಳೂ, ಉಪಜಾತಿ ವೃತ್ತಗಳೂ, ಅರ್ಧ ಸಮವೃತ್ತವೂ, ಕನ್ನಡಭಾಷೆಯಲ್ಲಿ ಅಸಾಧಾರಣಗಳಾದ ಅಕ್ಕರ, ತ್ರಿಪದಿಗಳೂ ಅಲ್ಲಲ್ಲಿ ಇರುವುವು ಆದರೆ ದ್ರಾವಿಡ ಭಾಷಾ ಪ್ರಪಂಚದ ಛಂದಸ್ಸಿಗೆ ಪ್ರಾಣಭೂತವಾದ ಪ್ರಾಸನಿಯಮಕ್ಕೆ ವಿರುದ್ಧವಾಗಿರುವ ಉಪಜಾತಿ ವೃತ್ತವನ್ನೂ,[1] ಕನ್ನಡ ಕಾವ್ಯಗಳಲ್ಲಿ ಎಲ್ಲಿಯೂ ದೊರಕದಿರುವ ಅರ್ಧ ಸಮವೃತ್ತವನ್ನೂ[2] ಈ ಕವಿಯು ಪ್ರಯೋಗಿಸಿರುವ ವಿಶೇಷಸಂಗತಿಯನ್ನು ಗಮನಿಸಬೇಕಾದುದೊಂದು ಮುಖ್ಯಾಂಶವು

ಕರ್ಣಾಟಕ ವ್ಯಾಕರಣಕಾರರು ಕನ್ನಡ ಭಾಷೆಯಲ್ಲಿ ಸಮಾಸಪದಗಳಲ್ಲಲ್ಲದೆ ವ್ಯಸ್ತ ಪದವಾಗಿ ಪ್ರಯೋಗಿಸಕೂಡದೆಂದು ಸಿಧ್ಧಾಂತಮಾಡಿರುವ[3] “ವಾ” “ಬತ” ಮೊದಲಾದ ಹಲವು ಸಂಸ್ಕೃತ ನಿಪಾತಾವ್ಯಯಗಳನ್ನು ಈ ಕವಿಯು ನಾನಾರ್ಥವರ್ಗದಲ್ಲಿ ಸೇರಿಸಿರುವುದರಿಂದ ಈತನು ಕರ್ಣಾಟಕ ಲಾಕ್ಷಣಿಕರ ಸಿದ್ಧಾಂತಕ್ಕೆ ವಿರುದ್ಧವಾಗಿ ಸಂಸ್ಕೃತ ನಿಪಾತಾವ್ಯಯಗಳನ್ನೂ ಸಮ ಸಂಸ್ಕೃತ ಪದಗಳಂತಯೇ ಕನ್ನಡ ಗ್ರಂಥಗಳಲ್ಲಿ ವ್ಯಸ್ತವಾಗಿ ಪ್ರಯೋಗಿಸಬಹುದೆಂಬ ವಿಷಯವನ್ನು ಜ್ಞಾಪಿಸಿರುವನೆಂದು ಕೆಲವರು ವಾದಿಸಬಹುದು ಆದರೆ ಈ ಶಬ್ದಗಳನ್ನು ಇಲ್ಲಿ ಹೇಳಿರುವುದಕ್ಕೆ ಹಾಗೆ ತಾತ್ಪರ್ಯವನ್ನು ಕಲ್ಪಿಸುವುದು ಅಷ್ಟು ಉಚಿತವಾಗಲಾರದು. ಸಂಸ್ಕೃತ ಸಮಸ್ತ ಪದಗಳಲ್ಲಿ (ಸಮ ಸಂಸ್ಕೃತ ಪದಗಳಲ್ಲಿ) ಸೇರಿರುವ ಸಂಸ್ಕೃತ ನಿಪಾತಾವ್ಯಯಗಳ ಅರ್ಥವು ತನ್ನ ಕೋಶವನ್ನು ಓದತಕ್ಕ ಕನ್ನಡಿಗರಿಗೆ ಸುಲಭವಾಗಿ ತಿಳಿಯಬೇಕೆಂಬುದೇ ಅಂತಹ ಶಬ್ದಗಳನ್ನು ಇಲ್ಲಿ ಸೇರಿಸಿರುವುದಕ್ಕೆ ಈ ಕವಿಯ ಮುಖ್ಯ ತಾತ್ಪರ್ಯವೆಂದು ಕಲ್ಪಿಸುವುದಾದರೆ ಯಾವ ಬಗೆಯ ದೋಷಕ್ಕೂ ಅವಕಾಶವಿರುವುದಿಲ್ಲ.

ಈ ಕವಿಯು “ವಾಕ್” ಮೊದಲಾದ ಕೆಲವು ವ್ಯಂಜನಾಂತ ಶಬ್ದಗಳ “ವಾಕ್ಕು” ಮೊದಲಾದ ಸಮಸಂಸ್ಕೃತರೂಪಗಳನ್ನು ಕೊಡದೆ ಸಂಸ್ಕೃತ ಮೂಲರೂಪಗಳನ್ನೇ ಈ ಸಮಸಂಸ್ಕೃತ ಶಬ್ದಗಳ ನಿಘಂಟುವಿನಲ್ಲಿ ಕೊಟ್ಟಿರುವುದು ವಿಚಾರಾರ್ಹವಾದುದು. ಆದರೆ ಅಂತಹ ಪದಗಳನ್ನು ಇತರ ಪರ್ಯಾಯ ಪದಗಳೊಡನೆ ದ್ವಂದ್ವಸಮಾಸಮಾಡಿ ಈ ದೋಷವನ್ನು ದೂರ ಮಾಡಬಹುದು. ಇದಲ್ಲದೆ, ಕನ್ನಡ ವ್ಯಾಕರಣ ನಿಯಮಕ್ಕೆ ವಿರುದ್ಧವಾಗಿರುವ, ಅಕಾರಾಂತ ಶಬ್ದಗಳ ಪ್ರಕೃತಿ ಪ್ರಯೋಗವೂ,[4] ಲಘ್ವಕ್ಷರಾಂತ ಪದಗಳ ಮುಂದ ಸಂಯುಕ್ತ ವ್ಯಂಜನಾದಿ ಪದಗಳ ಪ್ರಯೋಗವೂ[5] ಅಲ್ಲಲ್ಲಿ ಕಂಡು ಬರುವುವು.

---

[1] ಅವಿ. ಮೃಗ. ೧೩. [2] ಸಾ. ವಿ ಣ. ೪೩ ಸಮುದಿತ ಸಂಖ್ಯಾ. ವ್ಯಯರಹಿತ...ಶಬ್ದಮಣಿ ದರ್ಪಣಂ, [3] ವಾನರ (ವಿಕಲ್ಪದಿಂದ ಮನುಷ್ಯ) [4] ಅವಿ. ಪಶು. ೧-೩. [5] ಅವಿ ಸಮ. ೨೬.

ಸಂಸ್ಕೃತ ಶಬ್ದಗಳ ಅಂತ, ಲಿಂಗ, ವಿಭಕ್ತ್ಯಾದಿಗಳ ಪರಿಚಯವು ಕಡಿಮೆಯಾಗಿರುವು ದರಿಂದ ಸಂಸ್ಕೃತ ಕೋಶಗಳ ಉಪಯೋಗವನ್ನು ಪಡೆಯಲು ಶಕ್ತಿ ಸಾಲದಿರುವ ಕನ್ನಡಿಗರಿಗೆ ಈ ಕೋಶವು ಹೆಚ್ಚು ಪ್ರಯೋಜನಕಾರಿಯಾಗಿರುವುದು

ಈ ಕೋಶಕಾರನು ಗ್ರಂಥದ ಪೀಠಿಕಾ ಪ್ರಕರಣದಲ್ಲಿ, ವರರುಚಿ, ಭಾಗುರಿ, ಹಲಾಯುಧ, ಶಾಶ್ವತ, ಧನಂಜಯ, ಅಮರಕೋಶ ಮೊದಲಾದ ಸಂಸ್ಕೃತ ಕೋಶಗಳಿಂದ ಶಬ್ದಗಳನ್ನು ಸಂಗ್ರಹಿಸಿ ಪ್ರಕೃತ ಗ್ರಂಥವನ್ನು ತಾನು ಬರೆದುದಾಗಿ ಹೇಳಿದ್ದರೂ, ವಿಶೇಷವಾಗಿ ಹಲಾಯುಧ ಕೋಶವನ್ನೇ ಅನುಸರಿಸಿರುವನು. ಅಮರಕೋಶದಲ್ಲಿರುವ ಹಲವು ಶಬ್ದಗಳೂ ಇದರಲ್ಲಿ ದೊರಕುವುವು. ಹೈಮ ಕೋಶದಲ್ಲಿಯ ಕೆಲವು ಅಪೂರ್ವ ಪದಗಳೂ[1] ಇದರಲ್ಲಿ ದೊರಕುವುದರಿಂದ ಆ ಕೋಶವನ್ನೂ ಈತನು ಉಪಯೋಗಿಸಿಕೊಂಡಿರುವಂತೆ ಊಹಿಸ ಬೇಕಾಗಿರುವುದು ಪರ್ಯಾಯ ಪದಗಳನ್ನು ಹೇಳುವಾಗ ಕೆಲವೆಡೆಗಳಲ್ಲಿ ಧನಂಜಯಕೋಶದಪಕ್ಕಿಯನ್ನು ಅನುಸರಿಸಿರುವನು ಭಾಗುರಿ, ವರರುಚಿ ಈ ಕೋಶಗಳ ಹಸ್ತಲಿಖಿತ ಪ್ರತಿಗಳಾವುವೂ ದೊರಕದಿರುವುದರಿಂದ ಅವುಗಳಿಗೆ ಈ ಗ್ರಂಥ ಕರ್ತೃವು ಎಷ್ಟು ಋಣಿಯಾಗಿರುವನೆಂದು ಹೇಳಲು ಪ್ರಕೃತಕ್ಕೆ ಸಾಧ್ಯವಿಲ್ಲವಾಗಿದೆ ವರರುಚಿ ಕೋಶವೆಂಬ ಹಸ್ತಲಿಖಿತ ಪ್ರತಿಯೊಂದು ಮದರಾಸ್ ಪ್ರಾಚ್ಯಕೋಶಾಗಾರದಲ್ಲಿರುವುದು ಸುಮಾರು ನೂರು ಕಾರಿ ಕೆಗಳುಳ್ಳ ಈ ಕೋಶವು, ಶಬ್ದಗಳ (ಸಮಾನಾರ್ಥಕ ಪರ್ಯಾಯ ಪದಗಳ) ಕೇವಲ ಲಿಂಗ ನಿರ್ಣಯ ವನ್ನು ಮಾತ್ರ ತಿಳಿಸುವುದರಿಂದ ಈ ಗ್ರಂಥ ಶೋಧನೆಯಲ್ಲಿ ಅದರ ಉಪಯೋಗವು ಅತ್ಯಲ್ಪವಾಗಿರು ವುದು. ಭಾಗುರಿರಚಿತವಾದ ಕ್ರಮವಾದ ಕೋಶವೊಂದು ದೊರಕದಿದ್ದರೂ, ಸಂಸ್ಕೃತ ಗ್ರಂಥಗಳ ವ್ಯಾಖ್ಯಾಕಾರರು ಅಲ್ಲಲ್ಲಿ ಉದ್ಧರಿಸಿರುವ ಕೆಲವು ವಾಕ್ಯಗಳು ಮಾತ್ರ ದೊರಕುವುವು. ಅವುಗಳಲ್ಲಿ ನಮಗೆ ದೊರಕಿದಷ್ಟು ಭಾಗವನ್ನು ಈ ಗ್ರಂಥ ಶೋಧನೆಯಲ್ಲಿ ಉಪಯೋಗಮಾಡಿಕೊಂಡಿದೆ.

ಕಾಂಡ ವರ್ಗಾದಿ ವಿಭಾಗ ಕ್ರಮದಲ್ಲಿ ಬರೆಯಲ್ಪಟ್ಟಿರುವ ನಿಘಂಟುಗಳಲ್ಲಿ ಅಮರಕೋಶ (ನಾಮಲಿಂಗಾನುಶಾಸನ)ವೇ ಮೊತ್ತಮೊದಲ ಗ್ರಂಥವು. ಈ ವಿಭಾಗ ಸೌಕರ್ಯವನ್ನೊಳಗೊಂಡಿರು ವುದರಿಂದಲೇ ಮೇಲಾದ ಮತ್ತಾವ ನಿಘಂಟುವಾದರೂ ಇದರಷ್ಟು ಸಾರ್ವಜನೀನವಾಗಲಿಲ್ಲ. ಹಲಾ ಯುಧ ಕೋಶದಲ್ಲಿ ಕಾಂಡಗಳ ವಿಭಾಗವುಂಟು. ವರ್ಗಗಳ ವಿಭಾಗವಿಲ್ಲ

ಈ ಕೋಶಕಾರನ ಕಾಂಡ ವರ್ಗವಿಭಾಗಕ್ರಮವು ಇವರಿಬ್ಬರ ವಿಭಾಗ ಕ್ರಮಕ್ಕಿಂತಲೂ ವಿಲಕ್ಷಣವಾಗಿರುವುದು. ಅಮರಕೋಶದಲ್ಲಿ ಕಾಂಡಗಳು ಮೂರು, ಮೊದಲನೆಯ ಕಾಂಡದಲ್ಲಿ ಸ್ವರ್ಗಮರ್ತ್ಯಪಾತಾಳಗಳೆಂಬ ಮೂರು ಲೋಕಗಳಿಗೂ ಸಂಬಂಧಿಸಿರುವ ಪದಾರ್ಥಗಳನ್ನು ತಿಳಿ ಸುವ ಶಬ್ದಗಳು ಅಡಕವಾಗಿರುವುವು. ಈ ವಿಭಾಗಕ್ರಮವನ್ನನುಸರಿಸಿ, ಸ್ವರ್ಗ, ವ್ಯೋಮ, ದಿಕ್ಕು, ಕಾಲ, ಧೀ, ವಾಕ್ಕು, ಶಬ್ದಾದಿ, ನಾಟ್ಯ, ಪಾತಾಳ, ಭೋಗಿ, ನರಕ, ವಾರಿ ಹನ್ನೆರಡು ವರ್ಗಗಳಿರು ವುವು. ಎರಡನೆಯ ಕಾಂಡದಲ್ಲಿ ಭೂಮಿಗೆ ಸಂಬಂಧಿಸಿರುವ ಪದಾರ್ಥಗಳನ್ನು ಮಾತ್ರ ತಿಳಿಸುವ ಶಬ್ದ ಗಳು ಸಂಗ್ರಹಿಸಲ್ಪಟ್ಟಿರುವುವು. ಇದರಲ್ಲಿ ವಿಷಯಾನುಗುಣವಾಗಿ ಭೂ, ಪುರ, ಶೈಲ, ವನೌಷಧಿ, ಮೃಗಾದಿ, ಮನುಷ್ಯ, ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ, ಎಂಬ ಹತ್ತುವರ್ಗಗಳಿರುವುವು. ಮೂರ

[1] ಸಮ. ೩೫-೩೭.

ನೆಯ ಕಾಂಡದಲ್ಲಿ, ವಿಶೇಷ್ಯನಿಘ್ನ, ಸಂಕೀರ್ಣ, ನಾನಾರ್ಥ, ಅವ್ಯಯ, ಲಿಂಗಾದಿಸಂಗ್ರಹ[1] ಎಂಬ ಐದು ವರ್ಗಗಳಲ್ಲಿ, ವಿಶೇಷ್ಯಪದಗಳೂ, ಸಂಕೀರ್ಣಪದಗಳೂ, ನಾನಾರ್ಥಪದಗಳೂ, ಅವ್ಯಯಗಳೂ, ಶಬ್ದಗಳ ಲಿಂಗ ನಿರ್ಣಯವೂ ಹೇಳಲ್ಪಟ್ಟಿರುವುವು

ಹಲಾಯುಧಕೋಶದಲ್ಲಿ (ಅಭಿಧಾನರತ್ನಮಾಲೆ) ಸ್ವರ್ಗಕಾಂಡ, ಭೂಮಿಕಾಂಡ ಪಾತಾಳ ಕಾಂಡ, ಸಾಮಾನ್ಯಕಾಂಡ, ನಾನಾರ್ಥಕಾಂಡಗಳೆಂಬ ಐದು ಕಾಂಡಗಳುಂಟು, ಈ ಕೋಶಾನುಸಾರ ವಾಗಿಯೇ ಪ್ರಕೃತಕೋಶಕಾರನು, ಈ ಸ್ವರ್ಗ, ಭೂಮಿ, ಪಾತಾಳಕಾಂಡಗಳಲ್ಲಿಯ ಶಬ್ದಗಳನ್ನು ಒಟ್ಟುಗೂಡಿಸಿ ಒಂದು ಕಾಂಡದಲ್ಲಿ ಅಡಕಮಾಡಿ "ಅವಿಭಿನ್ನಾರ್ಥಕಾಂಡ"ವೆಂದು ಅದಕ್ಕೆ ಹೆಸರನ್ನು ಕೊಟ್ಟಿರುವನು, ಉಳಿದ ಸಾಮಾನ್ಯ, ನಾನಾರ್ಥಕಾಂಡಗಳ ಹೆಸರನ್ನೂ ಶಬ್ದ ಸಮುದಾಯವನ್ನೂ ಮಾರ್ಪಡಿಸದೆ ಅದರಂತೆಯೇ ಹೇಳಿರುವನು. ಅಲ್ಲದೆ ಅಮರಸಿಂಹನು ತನ್ನ ಕೋಶದ ಮೊದ ಲೆರಡು ಕಾಂಡಗಳಲ್ಲಿ ಹೇಳಿರುವ ವಿಷಯವನ್ನು ಈತನು ತನ್ನ ಕೋಶದ ಮೊದಲನೆಯ ಕಾಂಡ ದಲ್ಲಿಯೂ, ಅಮರದ ಮೂರನೆಯ ಕಾಂಡದ ವಿಶೇಷ್ಯನಿಘ್ನ ಸಂಕೀರ್ಣವರ್ಗಗಳಲ್ಲಿ ಹೇಳಿರುವ ವಿಷಯವನ್ನು ತನ್ನ ಕೋಶದ ಎರಡನೆಯ ಕಾಂಡದಲ್ಲಿಯೂ, ನಾನಾರ್ಥ ಅವ್ಯಯವರ್ಗಗ ಳಲ್ಲಿಯ ವಿಷಯವನ್ನು ಮೂರನೆಯ ಕಾಂಡದಲ್ಲಿಯೂ ಸಂಗ್ರಹಿಸಿರುವನೆಂದೂ ವ್ಯಕ್ತವಾಗುವುದು ಕಾಂಡ ಸಂಖ್ಯೆಯಲ್ಲಿಯೂ, ಕಾಂಡಗಳನ್ನು ವರ್ಗೀಕರಿಸುವುದರಲ್ಲಿಯೂ ಈತನು ಅಮರಸಿಂಹ ನನ್ನು ಹಿಂಬಾಲಿಸಿದ್ದರೂ, ಶಬ್ದಗಳನ್ನು ವರ್ಗೀಕರಿಸುವುದರಲ್ಲಿ ಮಾತ್ರ ಭಿನ್ನಮಾರ್ಗವನ್ನವಲಂಬಿ ಸಿರುವನು ಈತನ ವರ್ಗವಿಭಾಗಕ್ರಮವು ಈ ರೀತಿಯಾಗಿರುವುದು[2] ಒಂದನೆಯ ಅವಿಭಿನ್ನಾರ್ಥ ಕಾಂಡದಲ್ಲಿ (೧) ಸ್ವರ್ಗವರ್ಗ, (೨) ಕಾಲವರ್ಗ, (೩) ಸಂಸರಣವರ್ಗ, (೪) ಸಲಿಲವರ್ಗ, (೫) ಭೂವರ್ಗ (೬) ಕಾಲಾಯಸಾದಿ ಧಾತುವರ್ಗ, (೭) ವನವರ್ಗ, (೮) ವೃಕ್ಷಾದಿವರ್ಗ, (೯) ಮೃಗ ಪಕ್ಷಿವರ್ಗ,[3] (೧೦) ಪುರಗೃಹೋಪಕರಣವರ್ಗ, (೧೧) ಮನುಷ್ಯವರ್ಗ,[4] (೧೨) ದೇಹಾವಯ ವಾದಿವರ್ಗ, (೧೩) ಭೂಷಣಾದಿವರ್ಗ, (೧೪) ಸಮರಾದಿ ಸಂಪ್ರಕೀರ್ಣವರ್ಗ, (೧೫) ಪಶುವರ್ಗ, (೧೬) [5]ಧಾನ್ಯವರ್ಗ, ಎಂದು ಹದಿನಾರು ವರ್ಗಗಳಿರುವುವು

ಎರಡನೆಯ ಸಾಮಾನ್ಯಕಾಂಡದಲ್ಲಿ, (೧) ವಿಶೇಷಣವರ್ಗ,[6] (೨) ವಿಶೇಷ್ಯವರ್ಗ ಎಂಬ ಎರಡು ವರ್ಗಗಳಿರುವುವು

---

[1] ಸಂಸ್ಕೃತದಲ್ಲಿ ಶಬ್ದಗಳ ಲಿಂಗನಿರ್ಣಯದಲ್ಲಿ ತುಂಬಾ ತೊಡಕಿರುವುದರಿಂದ ಈ ವರ್ಗದ ಆವಶ್ಯಕತೆಯು ಹೆಚ್ಚಾಗಿರುವುದು ಕನ್ನಡದಲ್ಲಿ ಲಿಂಗನಿರ್ಣಯವು ಸುಕರವಾಗಿರುವುದರಿಂದ ಈ ವರ್ಗದ ಆವಶ್ಯಕತೆಯಿಲ್ಲವು

[2] "ಕ" ಪ್ರತಿಯಲ್ಲಿ ೮ ನೆಯ ವೃಕ್ಷಾದಿವರ್ಗದ ವರೆಗೂ, ವರ್ಗ ವಿಭಾಗವಿದೆ ಮುಂದಣ ವರ್ಗದ ಕೊನೆಯಲ್ಲಿ ಪಕ್ಷಿವರ್ಗ ೭ ಎಂದೂ ಕಾಂಡದ ಕೊನೆಯಲ್ಲಿ ಪಂಚದಶ ಸರ್ಗ ಎಂದೂ ಬರೆದಿರುವುದು ಲೇಖಕನ ಪ್ರಮಾದವಲ್ಲದೆ ಬೇರಲ್ಲ

[3] "ಗ" ಪ್ರತಿಯಲ್ಲಿ ಮೃಗವರ್ಗ, ಪಕ್ಷಿವರ್ಗ ಎಂದು ವರ್ಗವು ಬೇರೆಬೇರೆಯಾಗಿರುವುದು

[4] "ಗ" ಪ್ರತಿಯಲ್ಲಿ ಬ್ರಾಹ್ಮಣವರ್ಗ, ಕ್ಷತ್ರಿಯವರ್ಗ, ವೈಶ್ಯವರ್ಗ, ಶೂದ್ರವರ್ಗ, ಮನುಷ್ಯ ಎಂದು ವಿಭಕ್ತವಾಗಿರುವುದು

[5] ರಸಾನ್ನವರ್ಗ (೧೭) ಧಾನ್ಯವರ್ಗ

[6] "ಗ" ಪ್ರತಿಯಲ್ಲಿ ವಿಶೇಷ್ಯ ನಿಘ್ನ... ಎಂದಿರುವುದು

ಮೂರನೆಯ ನಾನಾರ್ಥಕಾಂಡದಲ್ಲಿ ವರ್ಗ ವಿಭಾಗಾದಿ ಕ್ರಮಗಳಿಲ್ಲ. "ಕ" ಪ್ರತಿಯ ಅಂತ್ಯದಲ್ಲಿ—"೪೦೦ ಪದ್ಯಗಳು" ಎಂದು ಗ್ರಂಥ ಸಂಖ್ಯೆಯನ್ನು ಬರೆದಿರುವುದು ಈಗ ದೊರೆತಿರುವ ಪ್ರತಿಗಳಲ್ಲಿ ಗ್ರಂಥಸಂಖ್ಯೆಯು ೨೫೩ ಆಗುವುದರಿಂದ ಕೆಲವು ಪದ್ಯಗಳು ಲುಪ್ತವಾಗಿರಬಹುದೆಂದು ತಿಳಿಯ ಬೇಕಾಗಿರುವುದು

ಧನಂಜಯ ನಿಘಂಟುವಿನಲ್ಲಿ ಕಾಂಡವರ್ಗಾದಿ ವಿಭಾಗಕ್ರಮವಿಲ್ಲದೆ ಶಬ್ದಗಳೆಲ್ಲವೂ ದಂಡಾಕಾರವಾಗಿ ಹೇಳಲ್ಪಟ್ಟಿರುವುವು. ಈ ಕೋಶದಲ್ಲಿ ಶಬ್ದಗಳ ಆನುಪೂರ್ವಿಯನ್ನು ಹೇಳುವುದರಲ್ಲಿ ವೈಲಕ್ಷಣ್ಯವೊಂದುಂಟು ಗ್ರಂಥಾದಿಯ ಸ್ವೇಷ್ಟದೇವತಾಸ್ತುತಿರೂಪವಾದ ಪದ್ಯದಲ್ಲಿ—ಎರಡು ಎಂಬರ್ಥವನ್ನು ಕುಡುವ ದ್ವಂದ್ವ, ದ್ವಯ,[1] ಮೊದಲಾದ ಪದಗಳನ್ನು—ಜಿನ ಸಂಬಂಧಿಯಾದ ಪಾದಗಳ ದ್ವಂದ್ವವು ದ್ವಯವು ಯುಗಳವು . ..ಕಾಪಾಡಲಿ ಎಂದೂ, ಕ್ಷೇಮಾದಿ ಶಬ್ದಗಳನ್ನು ಗ್ರಂಥೋಪಸಂಹಾರರೂಪ ಪ್ರಶಸ್ತಿಪದ್ಯದಲ್ಲಿ ಎಲ್ಲರಿಗೂ ಕ್ಷೇಮವಾಗಲಿ ಎಂದೂ, ಪ್ರಕೃತ ವಿಷಯಕ್ಕೆ ಸಂಬಂಧಿಸಿ ಹೇಳಿರುವನು. ಈ ಕೋಶಕಾರನ ಈ ಭಂಗಿಯನ್ನೇ ಅನುಸರಿಸಿ ಈ ಕೋಶಕಾರನು ಮೊದಲನೆಯ ಕಾಂಡದ ಕೊನೆಯಲ್ಲಿ, ಲೋಕಕ್ಕೆ ಮಂಗಳವು ಕುಶಲವು .. ಉಂಟಾಗಲಿ, ಎಂದು ಮಂಗಳಾರ್ಥಕ ಪರ್ಯಾಯ ಪದಗಳನ್ನೂ[2] ಲೋಕದಲ್ಲಿ ಉಪದ್ರವವು, ಅರಿಷ್ಟವು...... ನಾಶವಾಗಲಿ, ಎಂದು ಅರಿಷ್ಟಪರ್ಯಾಯ ಪದಗಳನ್ನೂ ಪ್ರಶಸ್ತಿಪದ್ಯದಲ್ಲಿ ಸೇರಿಸಿ ಹೇಳಿರುವನು. ಅಲ್ಲದೆ ಧನಂಜಯ ಕೋಶಕಾರನು ಗ್ರಂಥಾದಿಯಲ್ಲಿ ಮೊದಲು "ಭೂ ರ್ಭೂಮಿ......"ಎಂದು ಭೂಪರ್ಯಾಯ ಪದಗಳನ್ನು ಹೇಳಿ ಒಡನೆಯೇ "ತತ್ಪರ್ಯಾಯಧರಶ್ಶೈಲಃ ತತ್ಪರ್ಯಾಯಪತಿರ್ನೃಪಃ" ಆ ಭೂಪರ್ಯಾಯ ಪದಗಳೊಡನೆ ಧರಶಬ್ದವನ್ನು ಸೇರಿಸುವುದರಿಂದ ಆಗುವ ಪರ್ಯಾಯಪದಗಳು ಪರ್ವತವಾಚಕಗಳಾಗುವುವೆಂದೂ, ಆ ಭೂಪರ್ಯಾಯ ಪದಗಳೊಡನೆ ಪತಿಶಬ್ದವನ್ನು ಸೇರಿಸುವುದರಿಂದ ಆಗುವ ಪರ್ಯಾಯಪದಗಳು ನೃಪವಾಚಕಗಳಾಗುವುವೆಂದೂ ಹೇಳಿರುವ ಭಂಗ್ಯಂತರವನ್ನೂ ಈತನು ಅಲ್ಲಲ್ಲಿ ಅನುಸರಿಸಿರುವನು ಮಾದರಿಗಾಗಿ ಅವಿಭಿನ್ನಾರ್ಥಕಾಂಡದ

ಮಹಿಕಾವಶ್ಯಾಯತುಷಾ ।
ರಹಿಮಪ್ರಾಲೇಯತುಹಿನ ನೀಹಾರಕರಂ ॥
....... ............ ।
.... ............... ॥ ॥ ೬೪ ॥
ಅಂಕಂ ಲಕ್ಷ್ಮಣಮದುಮೆ ಕ ।
ಳಂಕಾಭಿಜ್ಞಾನ ಚಿಹ್ನ ಲಾಂಛನಲಕ್ಷ್ಮಾ ॥
ಖ್ಯಂ ಕುಜಿಪದೆನಿಕುಂ ಹರಿ ।
ಣಾಂಕಾದಿಪ್ರಯೋಗದಿಂ ಶಶಿನಾಮಂ ॥ ॥ ೬೫ ॥

ಈ ಪದ್ಯಗಳನ್ನು ನೋಡತಕ್ಕುದು.

---

[1] ದ್ವಯಂ ದ್ವಿತಯ ಮುಭಯಂ ಯಮಲಂ ಯುಗಲಂ ಯುಗಂ ॥
ಯುಗ್ಮಂ ದ್ವಂದ್ವಂ ಯಮಂ ದ್ವೈತಂ ಪಾದಯೋಃ ಪಾತು ಜೈನಯೋಃ ॥ ೨ ॥
ಕ್ಷೇಮಂ ಕಲ್ಯಾಣ ಮುಭಯಂ ಶ್ರೇಯೋ ಭದ್ರಂ ಚ ಮಂಗಲಂ ॥
ಭಾವುಕಂ ಭವಿಕಂ ಭವ್ಯಂ ಕುಶಲಂ ಕ್ಷೇಮಮಸ್ತ್ರಿಯಾಂ ॥ ೨೦೦ ॥

[2] ಕಾಂಡಪ್ರಶಸ್ತಿ ಪದ್ಯ-೧-೩.

ನಾನಾರ್ಥಕಾಂಡದ ಕೊನೆಯ ಉಪಸಂಹಾರದಲ್ಲಿರುವ

ಪ್ರಾಚೀನಬರ್ಹಿ ಕೇಳ್ವಂ ।
ವಾಚಸ್ಪತಿವೇಟ್ವಿನೆಸೆಯುಂ ಪಂಂತವರ್ಗೆಂ ॥ ಗೋಚರವೆನೆ ಕವಿತಾಣ್ಣವೆ ।
ನೀಚಜನಪ್ರಕೃತಿ ಶಬ್ದಪಾರಾಂಗಣವುಂ॥ ೧೩೬ ಎಂಬ ಕಂದವು.

ಧನಂಜಯನಿಘಂಟುವಿನ—

ವಕ್ತಾ ವಾಚಸ್ಪತಿರ್ಯತ್ರ ಶ್ರೋತಾ ಶಕ್ರಸ್ತಥಾಪಿ ತೌ ॥
ಶಬ್ದಪಾರಾಯಣಸ್ಯಾಂತಂ ನ ಗತೌ ತತ್ರ ಕೇ ವಯಂ ॥

ಎಂಬ ಈ ಶ್ಲೋಕದ ಪರಿವರ್ತನವಾಗಿರುವುದು

ಈ ಧನಂಜಯನಿಘಂಟುವು ಮುದ್ರಿತವಾಗಿಲ್ಲ. ಮದ್ರಾಸ್ ಪ್ರಾಚ್ಯಕೋಶಾಲಯದಲ್ಲಿ ಸಂಗೃಹೀತವಾಗಿರುವ—ಶಿಲಾಯಂತ್ರಮುದ್ರಿತ ಪ್ರತಿಯಲ್ಲಿ—೨೦೦ ಅನುಷ್ಟುಪ್ ಶ್ಲೋಕಗಳಿರುವು ವಲ್ಲದೆ ಗ್ರಂಥಾಂತ್ಯದಲ್ಲಿ-ಇತಿ ಧನಂಜಯಸ್ಯ ಕೃತೌ ನಿಘಂಟುಸ್ಸಮಾಪ್ತಃ "ಎಂದಿದೆ" ಆದರೆ ನನಗೆ ದೊರಕಿದ ಒಂದು ಓಲೆಯ ಪ್ರತಿಯಲ್ಲಿ ಅಂತ್ಯ ಗದ್ಯವು "ಇತಿ ಧನಂಜಯಸ್ಯ ಕೃತೌ ನಿಘಂಟು ಸಮಯೇ ಶಬ್ದಸಂಕೀರ್ಣಪ್ರರೂಪಣಂ ನಾಮ ಪ್ರಥಮಃ ಪರಿಚ್ಛೇದಸ್ಸಮಾಪ್ತಃ" ಎಂದೂ, ಇತಿ ಧನಂಜಯಸ್ಯ ಕೃತೌ ನಿಘಂಟುಸಮಯೇ ನಾನಾರ್ಥಶಬ್ದಸಂಕೀರ್ಣಪ್ರರೂಪಣಂ ನಾಮ ದ್ವಿತೀಯಃ ಪರಿಚ್ಛೇದಃ। ಎಂದೂ ದೊರಕುವುದರಿಂದ ಈ ನಿಘಂಟುವಿಗೆ "ನಿಘಂಟು ಸಮಯ"ವೆಂಬ ಹೆಸರಿರುವು ದೆಂದೂ, ಇದರಲ್ಲಿ ಎರಡು ಪರಿಚ್ಛೇದಗಳಿರುವುವೆಂದೂ ತಿಳಿಯ ಬರುವುದು.

ತುಂಬಿಯು ಬಗೆಬಗೆಯ ಹೂಗಳಲ್ಲಿರುವ ಸಾರವಾದ ಪುಷ್ಪರಸವನ್ನು ಸಂಗ್ರಹಿಸಿ ಪರ ಮಾಸ್ವಾದ್ಯವಾದ ಜೇನೆಯ್ಯನ್ನು ಮಾಡಿ ಕೂಡಿಡುವಂತೆ ಈ ವಸ್ತುಕೋಶ ಕರ್ತೃವು ಹಲವು ನಿಘಂ ಟುಗಳಲ್ಲಿರುವ ಉತ್ತಮ ಮಾರ್ಗಗಳನ್ನು ಆರಿಸಿ ತಂದು ಕೊಂಡು ಅತ್ಯುತ್ತಮವಾದ ರೀತಿಯಲ್ಲಿ ಈ ಕರ್ಣಾಟಕ ನಿಘಂಟುವನ್ನು ವಿರಚಿಸಿ ಕವಿಗಳಿಗೂ, ಪಂಡಿತರಿಗೂ, ಕಾವ್ಯಮಾರ್ಗಪ್ರವಿಷ್ಟರುಗ ಳಿಗೂ ಅತಿಶಯವಾದ ಸೌಕರ್ಯವನ್ನು ಕಲ್ಪಿಸಿಕೊಟ್ಟು ಸರ್ವಜನಾಭಿನಂದನೀಯನಾಗಿರುವನು.

---

## ಗ್ರಂಥಕರ್ತೃ ವಿಚಾರಂ

"ಅಭಿಧಾನವಸ್ತುಕೋಶ" ವೆಂಬ ಈ ನಿಘಂಟುವನ್ನು ರಚಿಸಿದವನು ನಾಗವರ್ಮನೆಂಬ ವವನು.—ಇದನ್ನು ಈ ಕವಿಯೇ ತನ್ನ ಪ್ರಕೃತ ಗ್ರಂಥದ ಪೀಠಿಕೆಯಲ್ಲಿ—

"ವಿರಚಿಸಿದಂ ಕವಿಕಂಠಾ ।
ಭರಣನಿದಂ **ನಾಗವರ್ಮನೆ**ಮೆಚ್ಚುದರಾರ್ ॥ ೪ ॥
... ಶ್ರೇಯಸ್ಕನಾ ನಾಗವರ್ಮಂ ॥ ೪ ॥

ಕಾಂಡಪ್ರಶಸ್ತಿ—

---

[1] ಸುಕವಿಜನ .. ..... ಕವಿತಾಗುಣೋದಯಂ ನಾಗವರ್ಮ ವಿರಚಿತಮಪ್ಪ ಕಾವ್ಯಾವಲೋಕನ (ಪ್ರಕರಣಾಂತಗದ್ಯ)

........... ......ವಿಬುಧಮಂಡಳಿ ಪಂಡಿತ ನಾಗವರ್ಮನಂ ॥ ೩೬ ॥

ಸಾಮಾನ್ಯ ಕಾಂಡ ವಿ ೫. ವರ್ಗ

ಎಂಬ ಪದ್ಯಗಳಲ್ಲೂ—

ಇದು ಸಮಸ್ತ...... ..ಶ್ರೀನಾಗವರ್ಮ ವಿರಚಿತಮಪ್ಪಭಿಧಾನ ವಸ್ತುಕೋಶದೊಳ್......

ಎಂಬ ಕಾಂಡಗಳ ಕೊನೆಯಲ್ಲಿಯ ಪ್ರಶಸ್ತಿ ಗದ್ಯಗಳಲ್ಲೂ ಹೇಳಿಕೊಂಡಿರುವನು.

ನಾಕಿಗ, [1]ನಾಕಿ, ಎಂಬ ಸಂಗ್ರಹವಾದ ಬೇರೆಯ ಹೆಸರುಗಳೂ ಉಂಟು, ಅಲ್ಲದೆ ಇವನಿಗೆ ಪಂಡಿತ ನಾಗವರ್ಮ, ಕವಿನಾಗವರ್ಮ ಎಂಬ ವಿಶೇಷಣಯುಕ್ತವಾದ[2] ಹೆಸರುಗಳೂ ವಾಡಿಕೆಯಲ್ಲಿದ್ದುವೆಂದು ಇವನ ಗ್ರಂಥಗಳಿಂದಲೇ ತಿಳಿದು ಬರುವುದು. ಗ್ರಂಥದ ಆದಿಯಲ್ಲಿ ಗ್ರಂಥಕರ್ತನು ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಯಾಗುವುದಕ್ಕಾಗಿ ಸ್ವೇಷ್ಟ ದೇವತಾಸ್ತುತಿಯನ್ನು ಆಚರಿಸತಕ್ಕ ಪೂರ್ವಿಕರ ಸಂಪ್ರದಾಯವನ್ನನುಸರಿಸಿ ಈತನು ತನ್ನ ಗ್ರಂಥಗಳಲ್ಲಿ, ವರ್ಧಮಾನ ಜಿನ ಬಟಿಿಕ್ಕೆ ಸರಸ್ವತಿ ಇವರನ್ನು ಸ್ತುತಿಸಿರುವುದರಿಂದಲೂ ಈ ವಸ್ತುಕೋಶದ ಸಾಮಾನ್ಯಕಾಂಡದ ಕೊನೆಯ ಪ್ರಶಸ್ತಿ ಗದ್ಯದಲ್ಲಿ "ಇದು... ..ಜಿನಪದಾಂಭೋಜವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರವಚನ ರಚನಾಚತುರ.... .ಎಂದು ತನ್ನನ್ನು ಜಿನಭಕ್ತನೆಂದು ವಿಶೇಷಿಸಿ ಹೇಳಿಕೊಂಡಿರುವುದರಿಂದಲೂ ಕಾವ್ಯಾವಲೋಕನದ ಅಂತ್ಯಪ್ರಶಸ್ತಿಪದ್ಯಗಳಲ್ಲಿಯೂ "ದ್ವಿಜವಂಶಾರ್ಣವ......ಜಿನೇಂದ್ರಕ್ರಮಾಂಬುಜಚಂಚನ್ನವಚಂಚರೀಕ...॥ ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿರುವುದರಿಂದಲೂ ಜೈನ ಮತಕ್ಕೆ ಸೇರಿದವನೆಂದೂ ಬ್ರಾಹ್ಮಣಜಾತಿಯವನೆಂದೂ ತಿಳಿದುಬರುವುದು.[3] ಅಲ್ಲದೆ ಸರಸ್ವತಿಯನ್ನು ಶ್ರುತದೇವಿಯೆಂದು ವ್ಯವಹರಿಸುವುದು ಜೈನಸಂಪ್ರದಾಯವು. ಅಂತೆಯೇ ಈತನು...."ಶ್ರುತದೇವಿ ವಾಣಿ ...." ಎಂದು ಸರಸ್ವತಿಗೆ ಶ್ರುತದೇವಿಯೆಂದು ಹೇಳಿರುವುದರಿಂದಲೂ, "ಶ್ರುತದೇವೀ ಮುಕುರಂದಕಲ್ಪಲಪನಂ", ಎಂದು ಕಾವ್ಯಾವಲೋಕನ ವಸ್ತುಕೋಶಗಳಲ್ಲಿ ತನ್ನನ್ನು ಶ್ಲಾಘಿಸಿಕೊಂಡಿ

---

[1] .........ವಾಗ್ಗುಂಫದೊಳ್ ನಾಕಿಗಂ ॥ ೩೬ ॥ ನಾನಾರ್ಥಕಾಂಡ

ಅಭಿಧಾನ ವಸ್ತುಕೋಶ.—

[2] ... ....ಪಂಡಿತ ನಾಗವರ್ಮನಂ ॥ ೪೯೨ ॥

...ಭೂತಳದೊಳ್ಸಲೆ...ನಾಗವರ್ಮಂ .. ॥ ೭೪೦ ॥

......ಕವಿನಾಗವರ್ಮನಂ ॥ ೯೬೨ ॥

ಛಂದೋವಿಚಿತಿ ...ನಾಗವರ್ಮನ ಕೃತಿಗಳ್ ॥ ೯೬೫ ॥

ಕಾವ್ಯಾವಲೋಕನಂ—

......ಭೂಭಾಗದೊಳ್ ನಾಕಿಗಂ ॥ ೫ ॥

ಕಾಂಡಪ್ರಶಸ್ತಿ—

......ತಿರ್ದವಿವೇಕಿ ನಾಕಿಗಂ ॥ ೯೫೯ ॥

ಕಾವ್ಯಾವಲೋಕನಂ.—

[3] (ಅ) ದೇವಾದಿದೇವ......ವರ್ಧಮಾನ ಜಿನೇಂದ್ರಂ, ॥ ೧ ॥

ಶ್ರುತದೇವಿ...ಸರಸ್ವತಿ ವರದೆಯಾಗಿ... ॥ ೪ ॥

ವಸ್ತುಕೋಶ

ಶ್ರೀವರ್ಧಮಾನನಾನಕೆ......... ನಮಗಬಿವಂ ಪರಮಾಗಮಮೂರ್ತಿ......ಸರಸ್ವತೀದೇವಿ ವರದೆಯಕ್ಕೆ... ॥ ೨ ॥ ಕಾವ್ಯಾವಲೋಕನ.—

ರುವುದರಿಂದಲೂ ಈತನು ಜೈನಮತದವನೆಂಬುದು ಚೆನ್ನಾಗಿ ದೃಢಪಡುವುದು. ಇವನ ಬಿರುದುಗಳಲ್ಲಿ ಒಂದಾದ "ಅಭಿನವಶರ್ವವರ್ಮ" ಎಂಬ ಬಿರುದೂ ಈತನನ್ನು ಜೈನನೆಂದು ಹೇಳಲು ಅವಕಾಶವನ್ನು ಕೊಡುತ್ತಿರುವುದು ಈತನು ಶಬ್ದಸ್ಮೃತಿ—ಅಥವಾ ಭಾಷಾಭೂಷಣವೆಂಬ ಹೆಸರನ್ನಿಟ್ಟು ಕನ್ನಡ ಭಾಷೆಗೆ ವ್ಯಾಕರಣವೊಂದನ್ನು ಬರೆದು ಸಂಸ್ಕೃತದಲ್ಲಿ ಕಾತಂತ್ರಶಾಸ್ತ್ರವೆಂಬ ವ್ಯಾಕರಣವನ್ನು ಬರೆದ ಶರ್ವವರ್ಮನಷ್ಟು ಪ್ರಸಿದ್ಧಿಗೆ ಬಂದುದರಿಂದ ಪಂಡಿತರು ಈತನಿಗೆ ಅಭಿನವ ಶರ್ವವರ್ಮನೆಂಬ ಬಿರುದನ್ನಿತ್ತರೆಂದು ಹೇಳಿಕೊಂಡಿರುವನು. ಈ ಕಾತಂತ್ರ ವ್ಯಾಕರಣವನ್ನು ಬರೆದ ಶರ್ವವರ್ಮನು ಜೈನನು. ಈ ನಾಗವರ್ಮನೂ ಜೈನನಾಗಿದ್ದುದರಿಂದಲೇ ಜೈನಪಂಡಿತನ ಹೆಸರಾದ ಈ ಬಿರುದನ್ನು ಪಡೆದನು. ವೈದಿಕಮತದವನಾಗಿದ್ದರೆ, ವೈದಿಕ ಮತಕ್ಕೆ ಅನುಗುಣವಾಗಿ ವ್ಯಾಕರಣಶಾಸ್ತ್ರವನ್ನು ಪಡೆದಿರುವ ಪಾಣಿನಿಯ ಹೆಸರಿಗೆ ಸಂಬಂಧಿಸಿದ "ಅಭಿನವಪಾಣಿನಿ" ಎಂಬ ಬಿರುದನ್ನು ಪಡೆಯುತ್ತಿದ್ದನು.[1] ದಾಮೋದರನೆಂಬವನು ಈತನ ತಂದೆ.

ಕಾವ್ಯಾವಲೋಕನ ಗ್ರಂಥದಲ್ಲಿ ದೊರಕುವ—

ಛಂದೋವಿಚಿತಿ ಯಲಂಕೃತಿ ।
ಸಂದಭಿದಾ[ವಸ್ತು]ಕೋಶ ಮೆಂಬಿವು ವಾಕ್ಶ್ರೀ ॥
ಸುಂದರಿಗೆ ರತ್ನಮಂಡನ ।
ದಂದದೊಳಿರ್ದಪುವು ನಾಗವರ್ಮನ ಕೃತಿಗಳ್ ॥

ಎಂಬ ಪದ್ಯದಿಂದ ಈ ಅಭಿಧಾನವಸ್ತುಕೋಶವಲ್ಲದೆ ಕಾವ್ಯಾವಲೋಕನವೆಂಬ ಅಲಂಕೃತಿ ಗ್ರಂಥ, "ಛಂದೋವಿಚಿತಿ" ಯೆಂಬ ಛಂದಶ್ಶಾಸ್ತ್ರ ಇವೆರಡನ್ನೂ ಈತನೇ ಬರೆದಿರುವಂತೆ ತಿಳಿಯಬರುವುದು. ಕಾವ್ಯಾವಲೋಕನದ ಮೊದಲನೆಯ ಅಧಿಕರಣವಾದ "ಶಬ್ದಸ್ಮೃತಿ" ಯಲ್ಲಿ ಹೇಳಿರುವ ವ್ಯಾಕರಣ ವಿಷಯಗಳನ್ನೇ ಅನ್ಯೂನಾತಿರಿಕ್ತವಾಗಿ ಒಳಗೊಂಡಿರುವ "ಕರ್ಣಾಟಕಭಾಷಾ ಭೂಷಣ"[2]ವೆಂಬ ವ್ಯಾಕರಣ ಗ್ರಂಥವನ್ನೂ ಈತನೇ ಬರೆದವನೆಂದು ಹೇಳಲು ಆ ಗ್ರಂಥದ ಅಂತ್ಯದಲ್ಲಿರುವ

ಕರ್ಣಾಟ ಶಬ್ದಸೂತ್ರಾಣಿ ಲೋಕವ್ಯುತ್ಪತ್ತಿ ಸಿದ್ಧಯೇ ॥
ರಚಿತಾನಿ ಸ್ಫುಟಾರ್ಥಾನಿ ಕೃತಿನಾ ನಾಗವರ್ಮಣಾ ॥
ಜೀಯಾದಸೌ ಮಹಾಪ್ರೌಕ್ತಾ ನಾಗವರ್ಮಬುಧೋತ್ತಮಃ ।
ಯತ್ಪ್ರಜ್ಞಯಾ ಜಗತ್ಪೂಜ್ಯೈಃ ಯಾತಿ ಕರ್ಣಾಟಲಕ್ಷಣಂ ॥

ಕರ್ಣಾಟಕಭಾಷಾ ಭೂಷಣಂ ಸಮಾಪ್ತಂ—

ಈ ಪದ್ಯಗಳು ಅವಕಾಶವನ್ನು ಕೊಟ್ಟಿರುವುವು. ಈಗ ಮುದ್ರಿತವಾಗಿರುವ "ಛಂದೋಂಬುಧಿ" ಎಂಬ ಛಂದಶ್ಶಾಸ್ತ್ರವೂ, ಕರ್ಣಾಟಕ ಕಾದಂಬರಿಯೂ ಈ ಕವಿಯಿಂದಲೇ ರಚಿತವಾದುವೆಂದು ಕೆಲವರು ವಾದಿಸುತ್ತಿರುವರು. ಆದರೆ, ಕಾಲ, ದೇಶ, ಮತ, ಬಿರುದು, ತಾಯ್ತಂದೆಗಳು ಮೊದಲಾದ ಹಲವಿಷಯಗಳಲ್ಲಿ ಭೇದವಿರುವುದರಿಂದ ತದ್ಗ್ರಂಥ ಕರ್ತೃಗಳು ಏತದ್ಭಿನ್ನರೆಂದು ಹೇಳುವುದೇ ಸಮಂಜಸವೆಂದು ನಮಗೆ ತೋರುವುದು. ಈ ಪ್ರಚಾರದಲ್ಲಿರುವ ಛಂದೋಂಬುಧಿಯ ಕರ್ತೃವು

1 .....ಪೇಳ್ದಂ ದಾಮೋದರತನಯನೀ ವಚೋಲಂಕೃತಿಯಿಂ ॥ ೯೯ ॥

2 ಈ ಗ್ರಂಥವು ಕನ್ನಡಭಾಷೆಯ ವ್ಯಾಕರಣವಿಷಯವನ್ನು ಸಂಗ್ರಹವಾಗಿ ತಿಳಿಸುವುದು. ಸಂಸ್ಕೃತಭಾಷೆಯ ಸೂತ್ರವೃತ್ತಿಗಳಿಂದ ಬರೆಯಲ್ಪಟ್ಟಿರುವುದು.

ಈತನಲ್ಲದಮೇಲೆ ಈತನಿಂದ ಬರೆಯಲ್ಪಟ್ಟ ಛಂದೋವಿಚಿತಿಯಾವುದು? ಎಂದು ಹುಟ್ಟುವ ಪ್ರಶ್ನೆಗೆ ಇಂತು ಸಮಾಧಾನವನ್ನು ಹೇಳಬಹುದು.

ಮುದ್ರಿತವಾಗಿರುವ ಎರಡು ಬಗೆಯ "ಛಂದೋಂಬುಧಿ" ಗ್ರಂಥಗಳು ಈಗ ಪ್ರಚಾರದಲ್ಲಿರುವುವು ಅವುಗಳಲ್ಲೊಂದು ಮಂಗಳೂರಿನ ಬಾಸೆಲ್‌ಮಿಷನ್ ಮುದ್ರಾಲಯದಲ್ಲಿ ಕಿಟ್ಟಲ್ ಸಾಹೇಬರ ಮೇಲ್ವಿಚಾರಣೆಯಿಂದ ಮುದ್ರಿತವಾದುದು. ಎರಡನೆಯದು ಮೈಸೂರಿನ "ಕಾವ್ಯ ಕಲಾನಿಧಿ" ಮಾಸಪತ್ರಿಕೆಯ ಸಂಪಾದಕರ ಅಧ್ಯಕ್ಷತೆಯಿಂದ ಮುದ್ರಿತವಾಗಿರುವುದು. ಇವುಗಳಲ್ಲದೆ ಮದ್ರಾಸ್ - ಮೈಸೂರು ಪ್ರಾಚ್ಯಪುಸ್ತಕ ಭಾಂಡಾಗಾರಗಳಲ್ಲಿ ಸಂಗೃಹೀತಗಳಾಗಿರುವ ಹಲವು ಛಂದೋಂಬುಧಿಯ ಹಸ್ತಲಿಖಿತ ಪ್ರತಿಗಳೂ ದೊರಕುವುವು. ಇವುಗಳೆಲ್ಲವನ್ನೂ ವಿಮರ್ಶೆ ಮಾಡಿದರೆ ಈ ಅಂಶವು ವ್ಯಕ್ತಪಡುವುದು. ಕಿಟ್ಟಲ್ ಸಾಹೇಬರ ಮುದ್ರಣಪ್ರತಿಯಲ್ಲಿ ಗ್ರಂಥಾದಿಯ ಮಂಗಳ ಪದ್ಯಗಳೂ, ಕವಿಯ ವಿಷಯವನ್ನು ತಿಳಿಸುವ "ಅರಸಂ ರಕ್ಕಸಗಂಗಂ . ಮೊದಲಾದ ಪದ್ಯಗಳೂ ದೊರಕುವುದಿಲ್ಲ. ಆಧುನಿಕವಾದ (ಸೀಸಪದ್ಯ ಸಾಂಗತ್ಯಾದಿಗಳು) ಎಷ್ಟೋ ಪದ್ಯಗಳೂ ಹೆಚ್ಚಾಗಿ ಸೇರಿಹೋಗಿವೆ ಕೆಲವು ಹಸ್ತಲಿಖಿತ ಪ್ರತಿಗಳಲ್ಲಿ ಪ್ರಕರಣಾಂತಿಮ ಗದ್ಯವು ಭಗವದರ್ಹತ್ಪರಮೇಶ್ವರ. . . ಎಂದೂ, ಮತ್ತೆ ಕೆಲವರಲ್ಲಿ ಭಗವದ್ಭವಾನೀವಲ್ಲಭ.... ಎಂದೂ ಇರುವುದು, ಒಂದೇ ಲಕ್ಷಣವನ್ನು ತಿಳಿಸುವ ಎರಡು ಮೂರು ಪದ್ಯಗಳು ಹಲವು ಪ್ರತಿಗಳಲ್ಲಿ ಒಂದೇ ಸ್ಥಳದಲ್ಲಿ ದೂರಕುವುವು ಈ ಕಾರಣಗಳಿಂದ ಏತತ್ಕವಿಕೃತವಾದ ಛಂದೋ ವಿಚಿತಿಯೂ, ಬೇರೊಬ್ಬ ನಾಗವರ್ಮನಿಂದ ರಚಿತವಾದ ಛಂದೋಂಬುಧಿಯೂ, ಇನ್ನೂ ಹಲವು ಸಣ್ಣಪುಟ್ಟ ಛಂದೋಗ್ರಂಥಗಳೂ ಕಾಲಾಂತರದಲ್ಲಿ ಸಂಗ್ರಹಕಾರರಪ್ರಮಾದದಿಂದಲೋ? ಲೇಖಕರ ಭ್ರಾಂತಿಜ್ಞಾನದಿಂದಲೋ? ಮಿಳಿತವಾಗಿ ಹೋಗಿ ಈಗಿರುವ ಛಂದೋಂಬುಧಿಯ ರೂಪವಾಗಿ ಪರಿಣಮಿಸಿರಬಹುದೆಂದು ಊಹಿಸುವುದು ಅಯುಕ್ತಿಕವಾಗಲಾರದು.

[1]ಈ ಕವಿಗೆ ಸುಕವಿಜನಮನಸ್ಸರೋಜಿನೀ ರಾಜಹಂಸ, ಕವಿತಾಗುಣೋದಯ್ಯ,[2] ಅಭಿನವ ಶರ್ವವರ್ಮ,[3] ಪಂಡಿತ[4] ಕವಿಕರ್ಣಪೂರ[5] ಕವಿ ಕಂಠಾಭರಣ[6] ಮೊದಲಾದ ಬಿರುದುಗಳಿದ್ದಂತೆ

---

[1] ..... ಖ್ಯಾತ ಯಶಂ ಕವಿತಾಗುಣೋದಯಂ ॥ (೭೭೮)
ಶಾಂತಮನಂ ಕವಿತಾಗುಣೋದಯಂ ॥ (೪೨೨)
[2] ಸಮುಚಿತ..... .. ಅಮಳಿನ ಕವಿತಾಗುಣೋದಯ ಶ್ರೀ......॥ (೪೯೬)
ಇದು ಸಕಳ ಸುಕವಿಜನ ಮನಸ್ಸರೋಜಿನೀ ರಾಜಹಂಸಾಯಮಾನಾನೂನ ಕವಿತಾ ಗುಣೋದಯ ಶ್ರೀ॥ (ಕಾವ್ಯಾವಲೋಕನ)
ಇದು ವಿವಿಧವನವಿನೂತ ಜಿನಪದಾಂಬೋಜ ಪರಪ್ರ.......... ಕವಿತಾಗುಣೋದಯ...
ಶ್ರೀ ನಾಗವರ್ಮ.....................ವಸ್ತುಕೋಶ॥
[3] ಅಭಿಮತ ಶಬ್ದಸಂಸ್ಮರಣದಿಂ........' ಭಾವದಿಂದಭಿನವ ಶರ್ವವರ್ಮನಿವನೆಂದ ಪುದುರ್ವರೆ ನಾಗವರ್ಮನಂ.
[4] ......ಬಣ್ಣಿಕುಂ ವಿಬುಧಮಂಡಳಿ ಪಂಡಿತನಾಗವರ್ಮನಂ.
ವಸ್ತುಕೋಶ-ಸಾಮಾ- (೩೬)
ಕಾವ್ಯಾವಲೋಕನ- (೪೯೩)
[5] ದಾಮೋದರರ ಪ್ರಿಯಸುತಂ ಕವಿ ಕರ್ಣಪೂರಂ ॥ ೩೫ ॥ ಸಾಮಾನ್ಯ-
[6] ವಿರಚಿಸಿದಂ ಕವಿ ಕಂಠಾಭರಣನಿದಂ ನಾಗವರ್ಮನೆನೆ ಮೆಚ್ಚದರಾರ್ ॥ ೪ ॥
ವಸ್ತುಕೋಶ-

ಇವನ ಗ್ರಂಥಗಳಿಂದಲೇ ತಿಳಿದುಬರುವುದು ಇವುಗಳೆಲ್ಲೆಲ್ಲಾ "ಕವಿತಾಗುಣೋದಯ" ವೆಂಬುದೇ ಈತನ ಅತ್ಯಂತ ಪ್ರೀತಿಗೆ ಪಾತ್ರವಾದ ಬಿರುದು. ಪಂಡಿತ, ಕವಿ ಎಂಬಿವು ವ್ಯವಹಾರದಲ್ಲಿ ರೂಢಿಗೆ ಬಂದುವು, ಕವಿ ಕಂಠಾಭರಣನಿವಂ ಎಂಬುದನ್ನು ನಾಗವರ್ಮನಿಗೆ ವಿಶೇಷಣವಾಡುವುದರಿಂದ ಬಿರುದೆಂಬ ಅರ್ಥವನ್ನು ಕೊಡುವುದು

ಹಲಾಯುಧನು ತನ್ನ ನಿಘಂಟುವಿನ ಪೀಠಿಕೆಯಲ್ಲಿ—

ಇದ ಮಮರದತ್ತ... .... .ಶಾಸ್ತ್ರೇಭ್ಯಃ.
"ಅಭಿಧಾನ ರತ್ನಮಾಲಾ ಕವಿಕಂಠಾಭರಣಾರ್ಥ ಮುದ್ಧ್ರಿಯತೆ"—

ಈ "ಅಭಿಧಾನ ರತ್ನಮಾಲೆ"ಯೆಂಬ ಕೋಶವು ಅಮರಾದಿ ಬಹುಲ ನಿಘಂಟುಗಳಿಂದ ಕವಿಗಳ ಕಂಠಪಾಠಕ್ಕಾಗಿ (ಕಂಠಾಭರಣಕ್ಕಾಗಿ) ಉದ್ಧರಿಸಲ್ಪಟ್ಟಿದೆ ಎಂದು ಹೇಳಿರುವುದರಿಂದ ಹಲಾಯುಧ ಮಾರ್ಗಾನುಯಾಯಿಯಾದ ಈ ಕವಿಯು ಕವಿಕಂಠಾಭರಣ ಶಬ್ದವನ್ನು ಕಾವ್ಯವಿಶೇಷಣವಾಗಿ ಹೇಳಿರಬಹುದೆಂದು ಅರ್ಥಮಾಡುವುದಕ್ಕೂ ಅವಕಾಶವುಂಟು.

ತಾನು ಅಸಾಧಾರಣ ಪಂಡಿತನೆಂದೂ, ತಾನು ಹೋದಹೋದ ರಾಜಾಸ್ಥಾನಗಳಲ್ಲೆಲ್ಲಾ ಅಗ್ರಪೂಜೆಯನ್ನು ಪಡೆಯುತ್ತಿದ್ದವನೆಂದೂ ತನ್ನ ಗ್ರಂಥಗಳಲ್ಲಿ ಹಲವೆಡೆಗಳಲ್ಲಿ ಹೇಳಿಕೊಂಡಿರುವನು. ಇಷ್ಟು ಮಾತ್ರವಲ್ಲ [1]ಜಿತಬಾಣಂ—ಎಂಬ ಪ್ರಶಸ್ತಿಪದ್ಯದಲ್ಲಿ ಶ್ಲೇಷ ಭಂಗಿಯಿಂದ ಸಂಸ್ಕೃತದಲ್ಲಿ ಗದ್ಯ, ಪದ್ಯ, ಕವಿತಾ ಶಿರೋಮಣಿಗಳಾದ ಬಾಣ, ಮಯೂರ, ಮಾಘ, ಗುಣಾಢ್ಯ, ದಂಡಿ, ಧನಂಜಯ ಇವರನ್ನು ಕವಿತಾಧೋರಣೆಯಲ್ಲಿ ತಾನು ಕೀಟ್ಟಿಡಿಸಿರುವುದಾಗಿಯೂ ಹೇಳಿಕೊಂಡಿರುವನು. ಇದರಿಂದ ಇವನು ಉತ್ತಮವಾದ ಗದ್ಯ, ಪದ್ಯ ಕಾವ್ಯಗಳನ್ನೂ ಬರೆದಿರಬಹುದೆಂದು ಊಹಿಸಲು ಅವಕಾಶವುಂಟು.

ಈ ಕವಿಯು ತನ್ನ ದೇಶಕಾಲಗಳನ್ನು ಸ್ವವಿರಚಿತ ಗ್ರಂಥಗಳಲ್ಲಿ ಸಾಕ್ಷಾತ್ತಾಗಿ ಎಲ್ಲಿಯೂ ಹೇಳಿಕೊಂಡಿಲ್ಲ. ಈ ಕೋಶದಲ್ಲಿ, ಪೂರ್ವಿಕರಾದ ಸಂಸ್ಕೃತಕೋಶಕಾರರನ್ನು ಸ್ಮರಿಸುವಾಗ ಹೇಳಿರುವ ವರರುಚಿಯು—ಕ್ರಿ. ಪೂ. ೬ ನೆಯ ಶತಮಾನಕ್ಕೆ ಸೇರಿದವನು ಮತ್ತು ಪಾಣಿನಿಯ ಸಮಕಾಲದವನು. ಭಾಗುರಿ, ಶಾಶ್ವತ ಕೋಶಕರ್ತೃ ಇವರಿಬ್ಬರೂ ಅತ್ಯಂತ ಪ್ರಾಚೀನತಮರಾದುದರಿಂದ ಇವರ ಕಾಲಕ್ಕೂ ಪ್ರಕೃತ ಗ್ರಂಥಕರ್ತೃಗಳ ಕಾಲಕ್ಕೂ ಯಾವ ಸಂಬಂಧವೂ ಇಲ್ಲ ಅಮರಸಿಂಹನು ಕ್ರಿ. ಶ. ೮ ನೆಯ ಶತಮಾನದವನು. ಹಲಾಯುಧನು, ಒಂಭತ್ತನೆಯ ಶತಮಾನದ ಅಂತ್ಯದವನು, ಅಲ್ಲದೆ ಇದೇ ಕೋಶದ ಅಂತ್ಯ ಪ್ರಶಸ್ತಿಪದ್ಯದಲ್ಲಿ ಈ ಕವಿಯು ತನಗಿಂತಲೂ ನಿಕೃಷ್ಟರೆಂದು ಹೇಳಿಕೊಂಡಿರುವ ಕವಿಗಳಲ್ಲಿ ಬಾಣನು ಕ್ರಿ ಶ. ಆರನೆಯ ಶತಮಾನದವನು. ಮಯೂರ ಕವಿಯು ಈ ಬಾಣನ ಭಾವಮೈದುನಾದುದರಿಂದ ಈತನ ಸಮಕಾಲಿಕನೇಆಗಿರುವನು. ಮಾಘಕವಿಯೂ, ದಂಡಿಯೂ ಎಂಟನೆಯ ಶತಮಾನದ ಆದಿಭಾಗದಲ್ಲಿದ್ದವರು, ನಿಘಂಟುವನ್ನು ಬರೆದ ಧನಂಜಯ[2](೦)

---

[1] ಜಿತಬಾಣಂ ಹರಿಯಂತೆ......

[2] ಧನಂಜಯಎಂಬ ಹೆಸರಿನ ಸಂಸ್ಕೃತಕವಿಗಳು ಮೂವರಿರುವರು. ದಶರೂಪಕವನ್ನು ಬರೆದವನು ವೈದಿಕಮತದವನು. ಮತ್ತು ೧೦ ನೆಯ ಶತಮಾನದಲ್ಲಿನ ಮುಂಜನ ಆಸ್ಥಾನದಲ್ಲಿದ್ದವನು. ಮತ್ತೊಬ್ಬನು ೧೨ ನೆಯ ಶತಮಾನದವನು. ರಾಘವಪಾಂಡವೀಯವೆಂಬ ದ್ವಿಸಂಧಾನ ಕಾವ್ಯವನ್ನು ಬರೆದವನು.

ಕವಿಯು ಕ್ರಿ ಶ ೯ ನೆಯ ಶತಮಾನಕ್ಕೆ ಹಿಂದಣವನು ಏಕೆಂದರೆ ಇವನನ್ನು ೯ ನೆಯ ಶತಮಾನದ ಆದಿಯಲ್ಲಿದ್ದ ರಾಜಶೇಖರಕವಿಯೂ ೯೫೯ ರಲ್ಲಿದ್ದ ಸೋಮದೇವನೂ (ಯಶಸ್ತಿಲಕ ಚಂಪುವನ್ನು ಬರೆದವನು) ಸ್ತುತಿಸಿರುವರು

ಈ ಕವಿಯಿಂದ ಗ್ರಂಥದಲ್ಲಿ ಸ್ಮೃತರಾಗಿರುವ ಈ ಕವಿಗಳ ಕಾಲದಿಂದ ಈತನು ಕ್ರಿ ಶ ಹತ್ತನೆಯ ಶತಮಾನಕ್ಕೆ ಹಿಂದಣನವನಲ್ಲವೆಂದು ವ್ಯಕ್ತವಾಗುವುದು ಮತ್ತು ಕಾವ್ಯಾವಲೋಕನ ಗ್ರಂಥದಲ್ಲಿ ಲಕ್ಷ್ಯಭೂತವಾಗಿರುವ ಪದ್ಯಗಳೆಲ್ಲವೂ ಹತ್ತನೆಯ ಶತಮಾನದಲ್ಲಿ ಹಿಂದೆ ಇದ್ದ ಗುಣವರ್ಮ, ಪಂಪ, ಪೊನ್ನ, ರನ್ನ, ಮೊದಲಾದ ಹಲವು ಕವಿಗಳ ಗ್ರಂಥಗಳಿಂದ ಉದ್ಧೃತವಾಗಿರುವುದರಿಂದಲೂ ಈತನು ಹತ್ತನೆಯ ಶತಮಾನಕ್ಕೆ ಹಿಂದಣನವನಲ್ಲವೆಂದು ದೃಢಪಡುವುದು ಕರ್ಣಾಟಕ ಭಾಷಾ ಭೂಷಣದಲ್ಲಿ "ದ್ವಿತೀಯಾರ್ಥೇ ಚತುರ್ಥೀ" ಎಂಬ ಸೂತ್ರಕ್ಕೆ ಲಕ್ಷ್ಯವಾಗಿ ಉದಾಹೃತವಾಗಿರುವ "ಬಹುತಾಪಕ್ಕೆ ಬಿಗುರ್ತು ವಿಷ್ಣು ಪಡೆದಂ ಮತ್ಸ್ಯಾವತಾರಕ್ಕೆ" ಎಂಬ ಪದ್ಯವು ಕ್ರಿ ಶ ೧೧೦೦ ರಲ್ಲಿದ್ದ ನಾಗಚಂದ್ರನ (ಅಭಿನವಪಂಪ) ಪಂಪರಾಮಾಯಣದಿಂದ ಉದ್ಧೃತವಾಗಿರುವುದರಿಂದಲೂ, ಷಟ್ಪದೀರೂಪದಲ್ಲಿ "ಅಭಿನವಮಂಗರಾಜ ನಿಘಂಟು"ವೆಂಬ ಹೆಸರಿನಿಂದ ಬರೆಯಲ್ಪಟ್ಟಿರುವ ಕೋಶ ಕರ್ತೃವಾದ ಮಂಗರಾಜನು ಈ ವಸ್ತುಕೋಶವನ್ನು ಚೆನ್ನಾಗಿ ವಿಮರ್ಶಿಸಿ ನಿಘಂಟುವನ್ನು ಬರೆದುದಾಗಿ ಹೇಳಿರುವುದರಿಂದಲೂ ಈ ವಸ್ತುಕೋಶ, ಭಾಷಾ ಭೂಷಣಗಳ ಕರ್ತೃವಾದ ನಾಗವರ್ಮನು ಕ್ರಿ ಶ ೧೧೦೦ ರಿಂದ ಕ್ರಿ ಶ ೧೩೩೮ ರ ಮಧ್ಯಕಾಲದಲ್ಲಿ ಇದ್ದವನೆಂದು ನಿರ್ಧಾರವಾಗುವುದು

ಹೊಯ್ಸಳಬಲ್ಲಾಳ (ಕ್ರಿ ಶ ೧೧೭೩–೧೨೨೦) ಇವನ ಮಗ ನರಸಿಂಹ II (ಕ್ರಿ ಶ ೧೨೨೦–೧೨೩೫) ಇವ ಆಸ್ಥಾನದಲ್ಲಿದ್ದು ೧೨೦೯ ರಲ್ಲಿ ಯಶೋಧರ ಕಾವ್ಯವನ್ನೂ, ೧೨೩೦ ರಲ್ಲಿ ಅನಂತನಾಥಪುರಾಣವನ್ನೂ ಬರೆದ ಜನ್ನಕವಿಯು ತನ್ನ ಅನಂತನಾಥಪುರಾಣದ ಪೀಠಿಕೆಯಲ್ಲಿ ಕವಿಸಂಪ್ರದಾಯಾನುಸಾರವಾಗಿ "ರಾಮಚಂದ್ರಮುನಿ"ಗಳ ವರೆಗಣ ತನ್ನ ಗುರುಪರಂಪರೆಯನ್ನು ಹೇಳಿ, ತನ್ನ ಹೆಂಡತಿಯಾದ "ಲಕುಮಾದೇವಿಯ" ಗುರುವಾದ ಬಾಲಚಂದ್ರ ಯತಿಯವರೆಗಣ ಗರುಪರಂಪರೆಯನ್ನು ಹೇಳಿದ ಬಳಿಕ

ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯ ನಾನಾಗವ ।
ರ್ಮನಿದಾನೀಂತನಶರ್ವವರ್ಮನೆ ಗಡಂ ಜನ್ನಂಗುಪಾಧ್ಯಾಯನಿಂ ॥
ದು ನೃಸಿಂಹಕ್ಷಿತಿನಾಥನಲ್ಲಿ ಕಟಕೋಪಾಧ್ಯಾಯ ನಾರೆಂಬ[1] ಸೂ ॥
ಕ್ತಿ ನವೀನೋಜ್ವಲಬಾಣನಪ್ಪ ಸುಮನೋಬಾಣಂ ಕವಿಶ್ರೇಷ್ಠರೊಳ್ ॥ ೨೪ ॥

ಎಂಬ ಪದ್ಯದಲ್ಲಿ ತನ್ನ ಉಪಾಧ್ಯಾಯರಾದ ನಾಗವರ್ಮ, ಸುಮನೋಬಾಣರನ್ನು ಕೀರ್ತಿಸಿರುವನು ಈ ಪದ್ಯಕ್ಕೆ ಜನನಾಥನಾದ ಜಗದೇಕನಲ್ಲಿ ಕಟಕೋಪಾಧ್ಯಾಯನಾಗಿದ್ದು ಇದಾನೀಂತನ ಶರ್ವವರ್ಮನೆಂಬ ಬಿರುದನ್ನು ಪಡೆದಿದ್ದ ಪ್ರಸಿದ್ಧನಾದ ನಾಗವರ್ಮನೇ ಜನ್ನನಿಗೆ ಉಪಾಧ್ಯಾಯನಲ್ಲವೆ? ಇಂದು ನೃಸಿಂಹನಲ್ಲಿ ಕಟಕೋಪಾಧ್ಯಾಯನಾರೆಂದು ಕೇಳುವುದಾದರೆ ಕವಿಶ್ರೇಷ್ಠರಲ್ಲಿ ಸೂಕ್ತಿನವೀನೋಜ್ವಲಬಾಣನೆಂಬ ಬಿರುದನ್ನು ಪಡೆದಿರುವ ಸುಮನೋಬಾಣನಿರುವನು ಇವನೂ ಇಂದು ಜನ್ನನಿಗೆ ಉಪಾಧ್ಯಾಯನು ಎಂದು ಸುರಸವಾದ ಅರ್ಥವಾದುದರಿಂದ ಜನ್ನನು ಈ ಪದ್ಯದಲ್ಲಿ ತನಗೆ ಹಿಂದೆ ಉಪಾಧ್ಯಾಯನಾಗಿದ್ದ ನಾಗವರ್ಮನನ್ನೂ, ಈಗ ಉಪಾಧ್ಯಾಯನಾ

ಗಿರುವ ಸುಮನೋಬಾಣನನ್ನೂ ಸ್ತುತಿಸಿರುವನು. ವ್ಯಾಕರಣ ಶಾಸ್ತ್ರವನ್ನು ಬರೆದು ಪ್ರಸಿದ್ಧನಾಗಿದ್ದ ನಾಗವರ್ಮನೂ, ಉತ್ತಮವಾದ ಕಾವ್ಯವನ್ನು ಬರೆದು ಸೂಕ್ತಿ ನವೀನೋಜ್ಜ್ವಲನೆಂಬ ಬಿರುದನ್ನು ಪಡೆದಿರುವ ಸುಮನೋಬಾಣನೂ ಉಪಾಧ್ಯಾಯರಾಗಿದ್ದುದರಿಂದ ತನಗೆ ಶಾಸ್ತ್ರದಲ್ಲಿಯೂ, ಕವಿತ್ವದಲ್ಲಿಯೂ, ಅಸಾಧಾರಣವಾದ ಪಾಂಡಿತ್ಯವಿತ್ತೆಂಬುದನ್ನೂ ವ್ಯಂಜ್ಯ ಮರ್ಯಾದೆಯಿಂದ ಸೂಚಿಸಿರುವನು ಅಲ್ಲದೆ ತಾನು ಪಂಡಿತನೂ, ಕವಿಯೂ ಆಗಿದ್ದನೆಂಬ ಈ ವಿಷಯವನ್ನೇ ರನ್ನಂ ವೈಯಾಕರಣಂ, ಜನ್ನಂ ಮೇಣ್ ಕವಿಗಳೊಳಗೆ ವೈಯಾಕರಣಂ ಎಂದು ಯಶೋಧರ ಚರಿತೆಯಲ್ಲಿ ಸ್ಪಷ್ಟವಾಗಿ ಹೇಳಿಕೊಂಡಿರುವನು. ಕಾವ್ಯಾವಲೋಕನವನ್ನು ಬರೆದ ನಾಗವರ್ಮನಿಗೂ ಅಭಿನವ ಶಬ್ದಸಂಸ್ಮರಣದಿಂದ ಜನಕ್ಕೆ ತಿಳಿವನ್ನುಂಟುಮಾಡಿದುದರಿಂದ ಇದಾನೀಂತನ ಶರ್ವವರ್ಮ[1]ನೆಂಬ ಬಿರುದು ಬಂದಿತೆಂದು ತಿಳಿದು ಬರುವುದರಿಂದ ಜನ್ನನ ಉಪಾಧ್ಯಾಯನಾದ ನಾಗವರ್ಮನೇ, ಕಾವ್ಯಾವಲೋಕನ, ವಸ್ತುಕೋಶಗಳ ಕರ್ತೃವಾದ ನಾಗವರ್ಮನು ಎಂಬುದರಲ್ಲಿ ಯಾವ ಸಂದೇಹವೂ ಇರಲಾರದು. ಜನ್ನನು ನಾಗವರ್ಮನ ಶಿಷ್ಯನೆಂಬುದಕ್ಕೆ ಸೂಚಕವಾಗಿರುವ ಜನ್ನನ ಅನಂತನಾಥಪುರಾಣದ ಕೆಲವು ಪ್ರಯೋಗಗಳನ್ನು ಇಲ್ಲಿ ಉದಹರಿಸುವುದು ಅಪ್ರಕೃತವಾಗಲಾರದು ಸಂಸ್ಕೃತದಲ್ಲಿ ಅಪೂರ್ವ ಪ್ರಯೋಗದಲ್ಲದ್ದು ವಸ್ತುಕೋಶದಲ್ಲಿ "ಸದಕಂ ತಂಡುಲಮುಕ್ಷತೆ" ಎಂದು ಹೇಳಲ್ಪಟ್ಟಿರುವ ಸದಕ ಶಬ್ದವನ್ನೂ, ಪಾಯಸ (ಕ್ಷೈರೇಯ) ಶಬ್ದಪರ್ಯಾಯವಾದ "ತುಯ್ಯಲ್" ಎಂಬ ದೇಶ್ಯ ಶಬ್ದವನ್ನೂ, ಗಜಶಿಕ್ಷಾದಲ್ಲಿ ಉಪಯುಕ್ತವಾಗಿರುವ "ಯತ" "ಯಾತ" ಶಬ್ದವನ್ನೂ ವೃಷಭದ ಕಕುದಪರ್ಯಾಯವಾದ "ಇಣಿಲ್" ಎಂಬ ಪದವನ್ನೂ ಜನ್ನನು "ರಸತೋಯಂ ಭಾವ

---

1 ಈ ಪ್ರಕರಣದಲ್ಲಿ ಸುಮನೋಬಾಣನ ಬಿರುದು "ನವಿನೋಜ್ಜ್ವಲಬಾಣ" ಎಂದೋ "ಸೂಕ್ತಿನವೀನೋಜ್ಜ್ವಲಬಾಣ" ಎಂದೋ ನಿಷ್ಕೃಷ್ಟವಾಗಿ ಹೇಳಲು ಸಾಧ್ಯವಿಲ್ಲ. ಆದರೆ ಕುಸುಮಾವಳಿಯ "ವಿದಿತಕಥಾ. .ವರಬಾಣನ ಸೂಕ್ತಿ ಕಳಾಪವಗ್ಗದ ಕವಿಮಾಧವ ... ." ಈ ಪ್ರಯೋಗವನ್ನೂ, ಇನ್ನೂ ಕೆಲವು ಇತರ ಕವಿಗಳ ಪ್ರಯೋಗವನ್ನೂ ನೋಡುವುದಾದರೆ "ಸೂಕ್ತಿನವೀನೋಜ್ಜ್ವಲಬಾಣ" ಎಂಬುದೇ ಈತನ ಬಿರುದೆಂದು ಹೇಳಬೇಕಾಗುವುದು, ಮತ್ತು ಇಲ್ಲಿ ಎಂಬ, ಎನ್ನುವ ವಿಶೇಷಣಕ್ಕೆ ವಿಶೇಷ್ಯವಿಲ್ಲ ಎಂಬ ಸೂಕ್ತಿಎಂದು ಅನ್ವಯಿಸಿ ಸೂಕ್ತಿಶಬ್ದಕ್ಕೆ ವಿಶೇಷಣ ಮಾಡಿದರೂ ಈ ಸೂಕ್ತಿಯೆಂಬ ಪ್ರಥಮಾಂತಕ್ಕೆ ಅನ್ವಯಿಸುವ ಕ್ರಿಯಾಪದವಾದರೂ ಇಲ್ಲಿಲ್ಲ. ಮುಂದೆ ಸುಮನೋಬಾಣಂ ಎಂಬ ಅನನ್ವಿತವಾದ ಮತ್ತೊಂದು ಪ್ರಥಮಾಂತವೂ ಇರುವುದು. ಈ ಕಾರಣಗಳಿಂದ ಎಂಬ ಎಂಬಲ್ಲಿ ವಾಕ್ಯ ಪೂರ್ಣವಾಗುವಂತೆ ಪ್ರಕೃತದಲ್ಲಿ ಅರ್ಥ ಹೇಳಬೇಕಾಗಿರುವುದರಿಂದ ಎಂಬ ಎನ್ನುವ ಶಬ್ದವನ್ನು ಕವಿಯು ಪ್ರಯೋಗಿಸಿಲ್ಲವೆಂದೇ ಊಹಿಸಬೇಕಾಗುವುದು ಪಂಪಭಾರತದ "ನಿನಗೇನೆಂದೊಡಮೆಂದು ದೊಪ್ಪಿದಪುದಂ ತೇಕೆನ್ನ ನಿನ್ನೀಶರಾಸನದೊಳ್ ಶೂಲಕಪಾಲಪಾಣಿ ದಯೆಯಿಂ ಬಂದಿರ್ದ......"

ಎಂಬ ಪ್ರಯೋಗವನ್ನೂ—

ಶಾಂತಿಪುರಾಣದ—

"ಜಿನತತ್ತ್ವಂ ಸ್ಮರತತ್ತ್ವಮೆಂಬಿವೆರಡುಂ ದೂರಸ್ಥಮೆಂತೆನ್ನ ಆ ।
ಜಿನತತ್ತ್ವಂ.... ..."

ಕ್ಷಿತಿನಾಥರ್ಪಲರುಳ್ಳೊಡಂ.. ದೊರೆಯಾಯ್ತೆಂತೆನ್ನ ಸಜ್ಯೋತಿರುನ್ನತಿ....॥

ಪ್ರಯೋಗಗಳನ್ನೂ ವಿಮರ್ಶೆಮಾಡಿದರೆ ಇಲ್ಲಿಯೂ ಎನ್ನ ಎಂಬ ಪಾಠವು ಪ್ರಮಾದದಿಂದ ಎಂಬ ಎಂದು ಮಾರ್ಪಟ್ಟಂತೆ ಕಾಣುವುದು.

ಗಂಧಂ ಪದಸದಕಚಯಂ ಕಾವ್ಯಪುಷ್ಪಂ...೧-೬೪)——ಕಾಟಿಚ್ಚಿಕ್ಕಿಗೂಡುವವೋಲ್ ತುಯ್ಯಲ ನಿಂದ್ರವಂದಿ ತನ .(೧-೬೦) ಯತಯಾತ ಪ್ರೌಢಿಯಂ ಮಿಂಚಿನ ವೇಗವಡೆವಂ ..(೩-೩೫) ಇಣಿಗಿಡಿ ದಿಣಿಲಂ ಕೋಟ್ಟಿಕ್ಕಿಳಿನಣೆದು...(೪-೧೧೧) ಎಂದು ಅನಂತನಾಥ ಪುರಾಣದಲ್ಲಿ ಪ್ರಯೋಗಿಸಿರುವನು. ಈ ಅಪೂರ್ವಪದಗಳ ಪ್ರಯೋಗ ಸ್ಫೂರ್ತಿಯು ಜನ್ನನಿಗೆ ಉಪಾಧ್ಯಾಯನಾಗಿದ್ದ ನಾಗವರ್ಮನ ಅತಿನಿಕಟ ಸಾನ್ನಿಧ್ಯದಿಂದಲ್ಲದೆ ಬೇರೊಂದರಿಂದಲ್ಲವೆಂದು ಧಾರಾಳವಾಗಿ ಹೇಳಬಹುದು.

ಚಾಳುಕ್ಯರಾಜರಲ್ಲಿ ಜಗದೇಕಮಲ್ಲ ಎಂಬ ಹೆಸರಿನವರು ಇಬ್ಬರೆಂದು ಶಾಸನಗಳಿಂದ ತಿಳಿದು ಬರುವುದು. ಜಗದೇಕಮಲ್ಲ ಅಥವಾ ಜಯಸಿಂಹ ಎಂಬವನು, ಕ್ರಿ. ಶ ೧೦೧೫-೧೦೪೨ ವರೆಗೆ ಆಳಿದವನು. ಪೆರ್ಮಾಡಿ ಜಗದೇಕಮಲ್ಲನೆಂಬವನು ೧೧೩೬ ರಿಂದ ೧೧೫೧ ರ ವರೆಗೂ ರಾಜ್ಯಭಾರ ಮಾಡಿದವನು ಜನ್ನನ ಉಪಾಧ್ಯಾಯನಾಗಿದ್ದ ನಾಗವರ್ಮನು ೧೧೫೧ ರಲ್ಲಿ ಜಗದೇಕಮಲ್ಲನಲ್ಲಿ ಕಟಕೋಪಾಧ್ಯಾಯನಾಗಿದ್ದನೆಂದು ನಾವು ನಿಶ್ಚಯಿಸಬಹುದಾದುದರಿಂದ ಈತನ ಪ್ರಸಿದ್ಧಿಕಾಲವು ೧೧೫೦ ರಿಂದ ೧೧೯೦ ವರೆಗೂ ಇರಬಹುದೆಂದು ಹೇಳುವುದರಲ್ಲಿ ಯಾವ ಕೊರತೆಯೂ ಇರಲಾರದು.

೧೧೫೦ ರಲ್ಲಿ ಸಾಮಾನ್ಯವಾಗಿ ನಾಗವರ್ಮನಿಗೆ ೨೫ ವರುಷವಿರಬಹುದೆಂದೂ ೧೨೦೯ ರಲ್ಲಿ ಯಶೋಧರ ಕಾವ್ಯವನ್ನು ಬರೆದ ಜನ್ನನಿಗೆ ಸುಮಾರು ೩೦ ವರುಷವಿರಬಹುದೆಂದೂ ಊಹಿಸುವುದಾದರೆ ನಾಗವರ್ಮನ ಅಪರವಯಸ್ಸಿನಲ್ಲಿ ಎಂದರೆ ಸುಮಾರು ೬೫ ರಿಂದ ೮೦ ರ ವರೆಗೆ ಜನ್ನನು ಈತನ ಶಿಷ್ಯನಾಗಿದ್ದಿರಬಹುದೆಂದು ಊಹಿಸಿಕೊಳ್ಳುವುದರಲ್ಲಿ ಯಾವ ವಿಪ್ರತಿಪತ್ತಿಯೂ ಬರಲಾರದು.

ಜನ್ನನು ಅನಂತನಾಥಪುರಾಣವನ್ನು ಬರೆಯುವುದಕ್ಕೆ ಮೊದಲೇ ಈ ನಾಗವರ್ಮನು ಕಾಲಧರ್ಮವನ್ನೈದಿದ್ದುದರಿಂದ ತತ್ಕಾಲದಲ್ಲಿ ಸುಮನೋಬಾಣನನ್ನು ಉಪಾಧ್ಯಾಯನನ್ನಾಗಿ ಸ್ವೀಕರಿಸಿ, ನಾಗವರ್ಮನನ್ನು ಆ ನಾಗವರ್ಮನೆಂದು ನಿರ್ದೇಶಿಸಿ ಸುಮನೋಬಾಣನನ್ನು ಇಂದು ಉಪಾಧ್ಯಾಯನೆಂದು ನಿರ್ದೇಶಿಸಿ ಹೇಳಿರುವನು. ಈ ಅಭಿಪ್ರಾಯದಿಂದಲೇ 'ಜನ್ನಂಗುಪಾಧ್ಯಾಯಂ, ಎಂಬ ಪದವನ್ನು" ದೇಹಳೀ ದೀಪನ್ಯಾಯದಂತೆ ವಾಕ್ಯ ಮಧ್ಯದಲ್ಲಿ ಸೇರಿಸಿರುವನೆಂಬುದರಲ್ಲಿ ಸಂದೇಹವೇ ಇರದು.

ಈ ಸಂದರ್ಭದಲ್ಲಿ ವಿಮರ್ಶಿಸಬೇಕಾದ ಹಲವು ವಿಷಯಗಳಿದ್ದರೂ ವಿಸ್ತರ ಭಯದಿಂದ ಇಲ್ಲಿ ಸಂಗ್ರಹವಾಗಿ ಹೇಳಲಾಗಿದೆ. ದೋಷಜ್ಞರೂ ಗುಣಜ್ಞರೂ ಆದ ವಿದ್ವನ್ಮಣಿಗಳು ದೋಷವನ್ನು ದೂರೀಕರಿಸಿ ಗುಣಲೇಶವನ್ನಾದರೂ ಸ್ವೀಕರಿಸಿ ಆನಂದಿಸುವರೆಂದು ಪ್ರಕೃತ ವಿಮರ್ಶೆಯನ್ನು ಉಪಸಂಹರಿಸಿರುವೆವು.

ಇಂತು ಸಜ್ಜನವಿಧೇಯರು.

---

[1] ಇದಾನಿಂತನ ಶರ್ವವರ್ಮ, (ಈಗಣ ಶರ್ವವರ್ಮ,) ಅಭಿನವ ಶರ್ವವರ್ಮ, (ಹೊಸಬನಾದ ಶರ್ವವರ್ಮ,) ಎಂಬ ಎರಡು ಶಬ್ದಗಳಲ್ಲಿಯೂ ಇರುವ, ಈಗಣ, ಹೊಸಬ, ಎಂಬ ಅರ್ಥಗಳು ಭಿನ್ನಗಳೆಂದೂ, ಇವೆರಡು ಬಿರುದುಗಳೂ ಬೇರೆ ಬೇರೆಯೆಂದೂ ಹೇಳುವುದು ಸಯುಕ್ತಿಕವಲ್ಲ.

# ವಿಷಯಸೂಚಿಕೆ.





[1] ಶೈಲವರ್ಗಂ, ಪದ್ಯ-೪ ಕಾಲಾಯಿಸಾಧಾತುವರ್ಗ ೮ * ೧೪ ಪದ್ಯಗಳು. [2] ವನೌಷಧವರ್ಗಂ ೩೯. [3] ಮೃಗವರ್ಗ೮ ಪಕ್ಷಿವರ್ಗಂ ೧೬. [4] ಬ್ರಾಹ್ಮಣವರ್ಗಂ ೪೪ ಕ್ಷತ್ರಿಯವರ್ಗಂ ೧೫. ವೈಶ್ಯವರ್ಗಂ. ಶೂದ್ರವರ್ಗಂ ೬. ಮನುಷ್ಯವರ್ಗ ೧೫. ಎಂದು "ಗ" ಪ್ರತಿಯಲ್ಲಿದೆ.

ಶ್ರೀಃ.

# ನಾಗವರ್ಮವಿರಚಿತಂ

ಅಪ್ಪ

# ವಸ್ತುಕೋಶಂ.

ಅಥವಾ

## ಅಭಿಧಾನಕೋಶಂ

---

ನಮಸ್ಸಿದ್ಧೇಭ್ಯಃ.

ಅವಿಭಿನ್ನಾರ್ಥಕಾಂಡಂ. ಪ್ರಥಮಂ,

೧ ಸ್ವರ್ಗವರ್ಗಂ.

ಕಂ॥ ದೇವಾದಿದೇವನಭವಂ ।
ಕೇವಳಬೋಧಪ್ರಬುದ್ಧತತ್ವಂ ಮುಕ್ತಿ ॥
ಶ್ರೀವಲ್ಲಭನೆಮಗೀಗೆ ಸು ।
ಖಾವಾಪ್ತಿಯನೊಸೆದು ವರ್ಧಮಾನಜಿನೇಂದ್ರಂ ॥ ೧ ॥

ವರರುಚಿ ಹಲಾಯುಧಂ ಭಾ ।
ಗುರಿ ಶಾಶ್ವತಮಮರಕೋಶಮೆಂಬಿವು ಮೊದಲಾ ॥
ಗಿರೆ ಪೂರ್ವಶಾಸ್ತ್ರಮಂ ಸಂ ।
ಹರಿಸಿ ಮನಂಗೊಳೆ ನಿಘಂಟುವಂ ವಿರಚಿಸುವೆಂ ॥ ೨ ॥

ಪುದಿದ ಮನಸ್ತಮಮಂ ಬಿಡೆ ।
ಬೆದಱಿ ಸದರ್ಥಪ್ರಕಾಶಮಂ ಮಾಡುಗುಮು ॥
ಪುದಱಿಂ ಸಮಸ್ತವಿದ್ಯಾ ।
ಪ್ರದೀಪಮಭಿಧಾನಕೋಶಮಲ್ಲದೆ ಪೆಱತೇಂ ॥ ೩ ॥

ಕರಹು ಜಡಮತಿಯುಮಱಿವಂ ।
ತಿರೆ ಕನ್ನಡದಿಂ ಚಲಕ್ಕನಾಗಿರ್ಪನೆಗಂ ॥
ವಿರಚಿಸಿದಂ ಕವಿಕಂಠಾ ।
ಭರಣನಿದಂ ನಾಗವರ್ಮನೆನೆ ಪೊಚ್ಚಿದರಾರ್ ॥ ೪ ॥

ಕಂ॥ ಅವಿಭಿನ್ನಾರ್ಥಂ ಸಾವಮಾ ।
ನ್ಯವಾಚಕಕಂ ಭಿನ್ನವಾಚಿಯೆಂಬುದುವೊಂದಿಂ ॥
ತಿವು ಮೂಱು ಮಲ್ಲಿ ಕಾಂಡೆ ।
ಪ್ರವಿಭಾಗದೊಳೊಂದಿ ತೋಱ್ಕುರ್ಗವನುಗತಿಯಿಂದಂ ॥ ೫ ॥

ಪರ್ಯಾಯಶಬ್ದದೊಳ್ ತಾ ।
ತ್ಪರ್ಯದಿ ನೆಱೆದರ್ಥಗತಿಯಿನನ್ವರ್ಥತೆಯಿಂ ॥
ಪರ್ಯಾಳೋಚಿಸಿ ಕೊಳ್ಗಾ ।
ಹಾರ್ಯಮಿದೆಂದನಭಿಹಿತದೊಳಭಿಯೋಗಪರರ್ ॥ ೬ ॥

ಶ್ರುತದೇವಿ ವಾಣಿ ವಾಗ್ಭಾ ।
ರತಿ ವಚನಂ ಭಾಷೆ ವಾಚಿ ಗೀರ್ ಬ್ರಾಹ್ಮಿ ಸರ ॥
ಸ್ವತಿ ವರದೆಯಾಗಿ ಪದಪ ।
ದ್ಧತಿಯನೊಡೆಂಬಡೆ ನಿಮಿರ್ಚಿ ತಿರ್ದುಗೆ ದಯೆಯಿಂ ॥ ೭ ॥

ಪರಮೇಷ್ಠಿ ಪರಂಜ್ಯೋತಿ ।
ಸ್ಸ್ವರೂಪನಾಪ್ತಂ ತ್ರಿಲೋಕಗುರು ಸರ್ವಜ್ಞಂ ॥
ದುರಿತಹರನಕ್ಷಯಂ ವೀ ।
ತರಾಗನರ್ಹಂ ಜಿನೇಶ್ವರಂ ತೀರ್ಥಕರಂ ॥ ೮ ॥

ಸಿದ್ಧಾಂತಮಾಗಮಂ ಶ್ರುತಿ ।
ರಾದ್ಧಾಂತಂ ಪ್ರವಚನಂ ಜಿನೋದಿತಮಕ್ಕುಂ ॥
ಸದ್ಧರ್ಮಕಥಾ ಕಥನ ನಿ ।
ಬದ್ಧಗ್ರಂಥಂ ಪುರಾಣಮಿತಿಹಾಸಾಖ್ಯಂ ॥ ೯ ॥

ಬುದ್ಧಂ ಸಮಂತಭದ್ರಂ ।
ಸಿದ್ಧಾರ್ಥಂ ಮುನಿ ತಥಾಗತಂ ಷಡಭಿಜ್ಞಂ ॥
ಶೌದ್ಧೋದನಿ ದಶಬಳನ ।
ತ್ಯುದ್ಧತಮದಮದನವಿಜಯಿ ಶಾಕ್ಯಂ ಸುಗತಂ ॥ ೧೦ ॥

ಕಂ॥ ಸರಸಿರುಹಭವಂ ಬ್ರಹ್ಮಂ ।
ಹಿರಣ್ಯಗರ್ಭಂ ವಿಧಾತೃ ದೇವನಜಂ ಪಂ ॥
ಕರುಹಾಸನಂ ಪ್ರಜಾಪತಿ ।
ವಿರಿಂಚನಂ ವಿಧಿ ಪಿತಾಮಹಂ ಚತುರಾಸ್ಯಂ ॥ ೧೧ ॥

ವೇದಂ ಛಂದಂ ಶ್ರುತಿ ತ ।
ದ್ಭೇದಂ ಸಾಮರ್ಗ್ಯಜುಸ್ತ್ರಯಂ ತ್ರಯಿ ಯೆನಿಕುಂ ॥
ವೇದಾಂಗಷಟ್ತ್ರಯಂ ಶಿ ।
ಕ್ಷಾದಿಗಳುಪನಿಷದಮೆಂಬುದದು ವೇದಾನ್ತಂ ॥ ೧೨ ॥

ಮ॥ಸ್ರ॥ ಭವನೀಶಂ ಶಂಭು ರುದ್ರಂ ಪಶುಪತಿ ಗಿರಿಶಂ ಶೂಲಿ ಭರ್ಗಂ ಭವಾನೀ ।
ಧವನುಗ್ರಂ ವ್ಯೋಮಕೇಶಂ ಹರ ನತನುಹರಂ ಶಂಕರಂ ನೀಲಕಂಠಂ ॥
ಶಿವ ನೀಶಾನಂ ತ್ರಿಣೇತ್ರಂ ತ್ರಿಪುರಜಯಿ [ಗಿರೀಶಂ] ಕ್ರತುಧ್ವಂಸಕಂ ಸ್ಥಾ ।
ಣು ವಿರೂಪಾಕ್ಷಂ ಮೃಡಂ ಧೂರ್ಜಟಿ ಫಣಿಕಟಕಂ ವಾಮದೇವಂ ವೃಷಾಂಕಂ ॥ ೧೩ ॥

ಕಂ॥ ಗಂಗಾಧರಂ ಕಪಾಳಧ ।
ರಂ ಗಜವರರುಚಿರಚರ್ಮವಸನಧರಂ ಖ ॥
ಟ್ವಾಂಗಧರಂ ಗಿರಿತನಯಾ ।
ರ್ಧಾಂಗಧರಂ ಪೃಥುಜಟಾಧರಂ ಚಂದ್ರಧರಂ ॥ ೧೪ ॥

ಪ್ರಮಥಂ [ಗಣಂ]ಕಪರ್ದಂ ।
ಸಮುದಗ್ರಜಟಾಭರಂ ಪಿನಾಕಂ ಚಾಪಂ ॥
ಖಮರುದನಲಾತ್ಮಸೋಮಾ ।
ರ್ಕಮಹೀಸಲಿಲಂಗಳಂಗಮಭವಂಗೆಂದುಂ ॥ ೧೫ ॥

ಉಮೆ ಪಾರ್ವತಿ ಕಾತ್ಯಾಯನಿ ।
ಹಿಮವತ್ಸುತೆ ಚಂಡಿ ದುರ್ಗೆ ಮೇನಾತ್ಮಜೆ ಗೌ ॥
ರಿ ಮೃಡಾಣಿ ಗಿರಿಜೆ ರುದ್ರಾ ।
ಣಿ ಮಹೇಶ್ವರಿ ಕಾಳಿಯೆಂಬಿವಂಬಿಕೆಯ ಪೆಸರ್ ॥ ೧೬ ॥

ಕಂ॥ ಪರಶುಧರಂ ಗಣಪತಿ ವಿ।
ಘ್ನರಾಜ ನಿಭವದನ ನೇಕದಂತಂ ಲಂಬೋ ॥
ದರ ನಾಖುವಾಹನಂ ಶಂ।
ಕರನಗ್ರಸುತಂ ವಿನಾಯಕಂ ಹೇರಂಬಂ ॥ ೧೭ ॥

[ಗೌರೀಸುತಂ] ವಿಶಾಖಂ।
ತಾರಕರಿಪು ಷಣ್ಮುಖಂ ಮಹಾಸೇನಂ ಕ್ರೌಂ ॥
ಚಾರಿ ಗುಹಂ ಸೇನಾನಿ ಮ।
ಯೂರರಥಂ ಸ್ವಾಮಿ ಕಾರ್ತಿಕೇಯಂ ಸ್ಕಂದಂ ॥ ೧೮ ॥

ಚಾಮುಂಡಿ ಕರ್ಣಮೋಟಿ ಮ।
ಹಾಮಾಯಾಮೂರ್ತಿ ಚರ್ಚಿಕೆಯುಂ ಭೈರವಿಯಾ ॥
ನಾಮಮಿವಕ್ಕುಂ ಬ್ರಹ್ಮಾ।
ಣೀಮುಖ್ಯರೆನಿಪ್ಪರೇೞ್ವರುಂ ಮಾತೃಕೆಯರ್ ॥ ೧೯ ॥

ಮ॥ ವನಜಾಕ್ಷಂ ಪುರುಷೋತ್ತಮಂ ನಗಧರಂ ಶ್ರೀವತ್ಸಲಕ್ಷ್ಮಂ ಜನಾ।
ರ್ದನ ನಿಂದ್ರಾವರಜಂ ಚತುರ್ಭುಜ ನುಪೇಂದ್ರಂ ವಿಷ್ಣು ನಾರಾಯಣಂ॥
ದನುಜಾರಾತಿ ಮುಕುಂದ ನಬ್ಧಿಶಯನಂ ಗೋವರ್ಧನಂ ದೇವಕೀ।
ತನಯಂ ಕೇಶವ ನಚ್ಯುತಂ ಮುರಹರಂ ವೈಕುಂಠ ನಬ್ಜೋದರಂ॥೨೦॥

ಕಂ॥ ವನಮಾಲಿ ಬಭ್ರುವುಂ ಭುವ।
ನನಾಥ ನಜಿತಂ ದಶಾರ್ಹತನಯಂ ವಸುದೇ ॥
ವನ ತನಯ ನಾತ್ಮಭೂ ಪ।
ದ್ಮನಾಭನುಂ ವಿಶ್ವರೂಪಿ ವಿಷ್ವಕ್ಸೇನಂ ॥ ೨೧ ॥

ಶಾ॥ ಶ್ರೀವತ್ಸಂ ನರಕಾರ್ಯಧೋಕ್ಷಜ ನಜಂ ಪೀತಾಂಬರಂ ಚಕ್ರಭೃ।
ದ್ಗೋವಿಂದಂ ಹರಿ ಶೌರಿ ಮುಂಜವೃಜಿನಂ ಕಂಸಾರಿ ವಿಶ್ವಂಭರಂ ॥
ಮಾವ[ತ್ಸಂ ಸ್ವ]ಭವಂ ತ್ರಿವಿಕ್ರಮನವಂ ದಾಮೋದರಂ ಕೃಷ್ಣನ।
ಬ್ಜಾವಾಸಾಪತಿ ವಿಷ್ಟರಶ್ರವ ಹೃಷೀಕೇಶಂ ಸುಪರ್ಣಧ್ವಜಂ ॥ ೨೨ ॥

ಕಂ॥ ಗದೆ ಕೌಮೋದಕಿ ಚಕ್ರಂ ।
ಸುದರ್ಶನಂ ನದಸಿ ನಂದಕಂ ಧನು ಶಾರ್ಙ್ಗಂ ॥
ತದಲಂಕಾರಂ ಕೌಸ್ತುಭ ।
ಮದು ಗರುಡಂ ಕೇತು ಪಾಂಚಜನ್ಯಂ ಶಂಖಂ ॥ ೨೩ ॥

ತಂದೆ ವಸುದೇವನಾನಕ ।
ದುಂದುಭಿಯೆನೆ ನೆಗೞ್ದ ಮಹಿಮೆಯಿಂ ದೇವಕಿ ತಾಯ್ ॥
ನಂದನ ನನನ್ಯಜಂ ಶ್ರೀ ।
ಸುಂದರಿ ತನಗಿನಿಯಳಗ್ರಜಂ ಬಲದೇವಂ ॥ ೨೪ ॥

ಬಲ ನೇಕಕುಂಡಲಂ ತಾ ।
ಳಲಕ್ಷ್ಮ ನಸಿತಾಂಬರಂ ಪ್ರಲಂಬಘ್ನಂ ಲಾಂ ॥
ಗಲಿ ರೇವತೀಧವಂ ಹಲಿ ।
ಬಲಭದ್ರಂ ಮುಸಳಿ ಕಾಮಪಾಳಂ ರಾಮಂ ॥ ೨೫ ॥

ಶ್ರೀರಾಮೆ ಲಕ್ಷ್ಮಿ ಗೋಮಿನಿ ।
ವಾರಿರುಹಾವಸಥೆ ಪದ್ಮೆ ರಮೆ ಕಮಲೆ ಸುಧಾಂ ॥
ಭೋರಾಶಿತನಯೆ ಸಿರಿ ದಸು ।
ಜಾರಿಪ್ರಿಯೆ ಯೆಂದಿವಿಂದಿರಾ ನಾಮಂಗಳ್ ॥ ೨೬ ॥

ಮನಸಿಶಯಂ ಪ್ರದ್ಯುಮ್ನಂ ।
ಮನೋಭವಂ ಕಂತು ಮನ್ಮಥಂ ಕಂದರ್ಪಂ ॥
ಮನಸಿಜ ನನಂಗ ನಂಗಜ ।
ನನನ್ಯಜಂ ಮಕರಕೇತು ಮಾರಂ ಮದನಂ ॥ ೨೭ ॥

ಸ್ಮರ ನತನು ದರ್ಪಕಂ ಶಂ ।
ಬರಶೂರ್ಪಕವೈರಿ ಕುಸುಮಚಾಪಂ ಶೃಂಗಾ ॥
ರ[ರಸೈಕಯೋನಿ] ಕಾಮಂ ।
[ಸಿರಿಗುವರಂ]-ರತಿಮನೋಹರಂ ಮಧುಮಿತ್ರಂ ॥ ೨೮ ॥

ಕಂ॥ ಅರುಣಾನುಜಂ ಸುಪರ್ಣಂ ।
ಸುರೇಂದ್ರಮದಮರ್ದನಂ ಸುಪರ್ಣೀತನಯಂ ॥
ಗರುಡಂ ವಿಹಂಗರಾಜಂ ।
ಗರುತ್ಮ ನಹಿವೈರಿ ವೈನತೇಯಂ ತಾರ್ಕ್ಷ್ಯಂ ॥ ೨೯ ॥

ತ್ರಿದಿವಂ ಸ್ವ ಸ್ಸ್ವರ್ಗಂ ಸುರ ।
ಸದನಂ ನಾಕಂ ತ್ರಿವಿಷ್ಟಪಂ ದಿವಮೆಂದಿಂ ॥
ತಿದು ತಾ ನಮರ್ತ್ಯಭವನಂ ।
ತದುದ್ಭವ [ರ್ಕಳ್] ದಿವೌಕಸರ್ ದೇವರ್ಕಳ್ ॥ ೩೦ ॥

ಅಮರರ್ ಸುಪರ್ವರನಿಮಿಷ ।
ರಮರ್ತ್ಯರಸ್ವಪ್ನರದಿತಿತನಯರ್ ಲೇಖರ್ ॥
ಸುಮನರ್ ಗೀರ್ವಾಣರ್ ಸುರ ।
ರಮೃತಾಶರ್ ಕ್ರತುಭುಜರ್ ನಿಳಿಂಪರ್ ತ್ರಿದಶರ್ ॥ ೩೧ ॥

ದನುಜರ್ ದೈತೇಯರ್ ದಿತಿ ।
ತನೂಭವರ್ ಪೂರ್ವದೇವ ರಸುರರ್ ಪಾತಾ ॥
ಳನಿವಾಸಿಗಳ್ ಸುರದ್ವಿಷ ।
ರೆನೆ ದೈತ್ಯರ್ ಶುಕ್ರಶಿಷ್ಯರಾರ್ಗಮದೃಶ್ಯರ್ ॥ ೩೨ ॥

ಮ॥ ಪುರುಹೂತಂ ಮಘವಂ ದಿವಸ್ಪತಿ ಸುನಾಸೀರಂ ತುರಾಷಾಟ್ಪುರಂ ।
ದರೆನಾಖಂಡಲ ನಪ್ಸರಃಪತಿ ಬಿಡೌಜಂ ವಜ್ರಿ ಸಂಕ್ರಂದನಂ ॥
ಸುರರಾಜಂ ನಗವೈರಿ ದುಶ್ಚ್ಯವನನಿಂದ್ರಂ ಜಿಷ್ಣು ವೃದ್ಧಶ್ರವಂ ।
ಹರಿವಾಹಂ ಶತಮನ್ಯು ನೀರದರಥಂ ಶಕ್ರಂ ವೃಷಂ ವಾಸವಂ॥ ೩೩ ॥

ಕಂ॥ ಸುತ್ರಾಮನಾಖ್ಯಂ ದಶಶತ ।
ನೇತ್ರಂ ಕುಲಿಶಾಯುಧಂ ಋಭುಕ್ಷಂ ದಿವೇಶಂ ॥
ವೃತ್ರಪುಳೋಮಬಳಾಸುರ ।
ಗೋತ್ರಹರಂ ಪಾಕನಮುಚಿಜಂಭದ್ವಿಷ್ಟಂ ॥ ೩೪ ॥

ಕಂ॥ ಸತಿ ನೆಗೞ್ದಿಂದ್ರಾಣಿ ಪುಲೋ ।
ಮತನೂಭವೆ ಶಚಿ ಜಯಂತನಾತಂಗೆ ಸುತಂ ॥
ಕೃತಮತಿ ಪುರೋಹಿತಂ ವಾ ।
ಕ್ಪ [ತಿ ಮಾತ] ಳಿ ಸೂತನಾಯುಧಂ ಶತಧಾರಂ ॥ ೩೫ ॥

ಅಮರಾವತಿ ನಗರಿ ವನಂ ।
ನಮೇರುಮಂದಾರಪಾರಿಜಾತಾದಿಸುರ ॥
ದ್ರುಮಯೋನಿ ನಂದನಂ [ತುರ ।
ಗಮ] ದುಚ್ಚೈಶ್ರ್ಯವಸ ಮದುವೆ ದಿವಿಜತುರಂಗಂ ॥ ೩೬ ॥

ಐರಾವಣ ಮಭ್ರದ್ವಿಪ ।
ಮೈರಾವತ ಮಭ್ರಮೂಪ್ರಿಯಂ ದಿವಿಜಗಜಂ ॥
ಸಾರತರವಿವಿಧಮಣಿ ವಿ ।
ಸ್ತಾರನಿಧಾನಂ ಸುಧರ್ಮ್ಮಮಮರಾಸ್ಥಾನಂ ॥ ೩೭ ॥

ಪವಿ ಶತಧಾರಂ ದಂಭೋ ।
ಳಿ ವಜ್ರ ಮಿಂದ್ರಾಸ್ತ್ರ ಮಶನಿ ಕುಲಿಶಂ ಸ್ವರು ಶಂ ॥
ಬವಿನಿತ್ತುಮುಂ ತದೇಕಾ ।
ರ್ಥವಾಚಿ ಋಜು ರೋಹಿತಾಹ್ವಯಂ ಸುರಚಾಪಂ ॥ ೩೮ ॥

ಮ॥ ವಸು ವೈಶ್ವಾನರನಾಶುಶುಕ್ಷಣಿ ಹುತಾಶಂ ಕೃಷ್ಣವರ್ತ್ಮಂ ವಿಭಾ ।
ವಸು ಸಪ್ತಾರ್ಚಿ ಕೃಶಾನು ವಗ್ನಿ ದಹನಂ ಹವ್ಯಾಶನಂ ವಹ್ನಿ ವಾ ॥
ಯುಸಖಂ ಜ್ವಾಲಿ ಕೃಪೀಟಯೋನಿ ಯನಲಂ ಸ್ವಾಹಾಪ್ರಿಯಂಜಾತವೇ ।
ದಸ ನಪ್ಪಿತ್ತ ಮುಷರ್ಬುಧಂ ಹುತವಹಂ ಧೂಮಧ್ವಜಂ ಪಾವಕಂ ॥೩೯॥

ಕಂ॥ ಜ್ವಾಲಾಶಿಖಾರ್ಚಿ ಕಿಚ್ಚಿನ ।
ನಾಲಗೆಯು ಮಲಾತ ಮಂತದುಲ್ಕಿ ಕೆ ಮುಕ್ತ ॥
ಜ್ವಾಳೆಗಳಪುಳ್ಕಮೆನಿಕುಂ ।
ಜ್ವಾಲೆ ಕಣಂ ವಿಸ್ಫುಲಿಂಗ ಮೂಷ್ಮಂ ಬಾಷ್ಪಂ ॥ ೪೦ ॥

ಕಂ॥ ಯಮನರ್ಕಸುತಂ ಧರ್ಮಂ ।
ಯಮುನಾಸಹಜಂ ಪರೇತವಿಭು ದಂಡಧರಂ ॥
ಶಮನಂ ಪಿತೃಪತಿ ಕಾಲಂ ।
ಸಮವರ್ತಿ ಕೃತಾಂತನಂತಕಂ ಕೀನಾಶಂ ॥ ೪೧ ॥

ರಕ್ಷಃ ಕೋಣಪ ನೈಋತ ।
ರಾಕ್ಷಸ ಪುಣ್ಯಜನ ಯಾತುಧಾನ ಕ್ರವ್ಯಾ ॥
ದ ಕ್ಷಣದಾಚರ ರೆಂದು ಸ ।
ದೃಕ್ಷಾರ್ಥಂಗಳ್ ನಿಶಾಟಪರ್ಯಾಯಂಗಳ್ ॥ ೪೨ ॥

ವರುಣಂ ಪಶ್ಚಿಮದಿಕ್ಪತಿ ।
ಶರನಿಧಿಪತಿ ಪಾಶಪಾಣಿ ಯಾದೋನಾಥಂ ॥
ವರುಣಾನೀರಮಣಂ [ವಾ ।
ರಿರಾಶಿ] ನೆಳೆಯಂ ಪ್ರಚೇತಸಂ ಪೆಸರಿಂದಂ ॥ ೪೩ ॥

ಪವಮಾನಂ ಶ್ವಸನಂ ಗಂ ।
ಧವಹಂ ಸತತಗತಿ ಮಾತರಿಶ್ವಂ ಮರುತಂ ॥
ಪವನಂ ಪ್ರಭಂಜನಂ ವಾ ।
ಯು ವಾತ ಮನಿಲಂ ಸಮೀರಣಂ ಪೃಷದಶ್ವಂ ॥ ೪೪ ॥

ಭೌತಿಕದೇಹಾಂತರ್ಗತ ।
ವಾತಂ ಪ್ರಾಣಾದಿಪಂಚಸಂಜ್ಞಂ ಝಂಝಾ ॥
ವಾತಂ ಸವೃಷ್ಟಿವಾತಂ ।
ವಾತೂಳಂ ವಾತ್ಯೆ ವಾತಮಂಡಳಿ ಯಕ್ಕುಂ ॥ ೪೫ ॥

ಧನಪತಿ ಯಕ್ಷಂ ಶ್ರೀದಂ ।
ಮನುಷ್ಯಧರ್ಮಂ ಕಪರ್ದಿಸಖ ನೈಳಬಿಳಂ ॥
ಧನದಂ ಕುಬೇರ ನಳಕಾ ।
ಧಿನಾಯಕಂ ಗುಹ್ಯಕೇಶ್ವರಂ ವೈಶ್ರವಣಂ ॥ ೪೬ ॥

ಕಂ॥ ನಳಕೂಬರಂ ತನೂಭವ ।
ನಳಕಾನಗರಂ ಪುರಂ ವನಂ ಚೈತ್ರರಥಂ ॥
ನಿಳಯಂ ಕೈಲಾಸಂ ತ ।
ದ್ವಿಳಾಸಯಾನಕ್ಕೆ ಪುಷ್ಪಕಂ ಪೆಸರಕ್ಕುಂ ॥ ೪೭ ॥

ಶತಮುಖ ಹುತವಹ ಯಮ ನೈ ।
ರುತಿ ವರುಣ ಮರುತ್ಕುಬೇರ ಶೂಲಧರರ್ ದಿ ॥
ಕ್ಪತಿಗಳವರೆಣ್ಬರುಂ ಕ್ರಮ ।
ಗತಿಯಿಂ ಪ್ರಾಚ್ಯಾದಿದಿಗಭಿರಕ್ಷಣನಿರತರ್ ॥ ೪೮ ॥

ತ್ರಿಪದಿ:— ಪ್ರಾಚಿಯವಾಚಿ ಪ್ರತೀಚಿಯುದೀಚಿಯಾ ।
ಶಾಚತುಷ್ಕಂ ಪರಿವಿಡಿಯಿಂದ ।
ವಾಚ[ತುಃ]ಪ್ರದಿಶ ವಿದಿಶೆಗಳ್ ॥ ೪೯ ॥

ಮ॥ ಸ್ರ॥ ಹರಿದಾಶಾದಿಕ್ಕಕುಪ್ಕಾಷ್ಠೆಗಳೆನೆ ದೆಸೆಗಳ್ ತದ್ದಿಶಾಚಕ್ರದೊಳ್ ಭೂ ।
ಭರಮಂ ತಾಳ್ದಿರ್ದುವೆಂಟುಂ ದಿಗಿಭನಿವಹಮೈರಾವಣಂ ಪುಂಡರೀಕಂ ॥
ದ್ವಿರದೇಂದ್ರಂ ಪುಷ್ಪದಂತಂ ಕುಮುದರದನಿ ಸಂದಂಜನಂ ವಾಮನಂ ಭಾ
ಸುರತೇಜಂ ಸಾರ್ವಭೌಮಂ ದ್ವಿಪಪತಿ ಶುಭ[ದಂತಾವಳಂ]ಸುಪ್ರತೀಕಂ
॥ ೫೦ ॥

ಕಂ॥ ಘನಮಾತಂಗಾದಿಗಳಂ ।
ಗನೆಯರ್ ತಾಮಭ್ರಮೂಕಪಿಳೆ ಪಿಂಗಳೆಯುಂ ॥
ಜನೆ ತಾಮ್ರಪರ್ಣಿ ಯಂಗನೆ ।
ಯನುಪಮೆ ಪಡೆಗುಂ ಶುಭರದನೆ ಯಿಭದಾಕ್ರಮದಿಂ ॥ ೫೧ ॥

ಮೇನಕೆ ರಂಭೆ ತಿಲೋತ್ತಮೆ ।
ತಾ (ನೂರ್ವಶಿ) ಮಂಜುಘೋಷೆ ಯೆಂಬಪ್ಸರೆಯರ್ ॥
ನಾನಾಪ್ರಕಾರಚಾರುಕ ।
ಳಾನಿಪುಣೆಯರಮರಗಣಿಕೆಯರ್ ಸಲೆ ನೆಗಳ್ದಿರ್ ॥ ೫೨ ॥

ಕಂ॥ ದೇವಚಿಕಿತ್ಸಕರಶ್ವಿನಿ ।
ದೇವರ್ ನಾಸತ್ಯರಶ್ವಿಗಳ್ ದಸ್ರಾಖ್ಯರ್ ॥
ದೇವರ ವರ್ಧಕಿ ವಿಶ್ವಮ ।
ಕೋವಿದಿತಂ ತ್ವಷ್ಟೃ ವಿಶ್ವಕರ್ಮಂ ಪೆಸರಿಂ ॥ ೨೩ ॥

ಖೇಚರ ಕಿನ್ನರ ಯಕ್ಷ ಪಿ ।
ಶಾಚರ್ ಗಂಧರ್ವರಪ್ಸರಃಪ್ರಕರಂ ದೋ ॥
ಷಾಚರರೆಂದದ್ಭುತಗುಣ ।
ಗೋಚರರವರೆಯ್ದೆ ದೇವಯೋನಿಗಳೆನಿಪರ್ ॥ ೨೪ ॥

ಅಮೃತಂ ಸುಧೆ ಪೀಯೂಷಂ ।
ಸಮಂತದೇಕಾರ್ಥಮಮರರುಣ್ಬಾಹಾರಂ ॥
ಯಮ ನಿಯತಿ ದಿಷ್ಟ ವಿಧಿನಾ ।
ಮ ಮಯೂನಯರೂಪಮಂತೆದಕ್ಕುಂ ದೈವಂ ॥ ೨೫ ॥

ಸುರಗಿರಿ ಮೇರುನಗಂ ಮಂ ।
ದರಾದ್ರಿ ಕನಕಾಚಳಂ ಸುಮೇರುಮಹೀಧ್ರಂ ॥
ಸುರದೀರ್ಘಿಕೆ ಮಂದಾಕಿನಿ ।
ಸುರನದಿ ವಿಷ್ಣುಪದಿ ಗಂಗೆ ಜಾಹ್ನವಿಯಕ್ಕುಂ ॥ ೨೬ ॥

ಸುರಸರಣಿ ವಿಷ್ಣುಪದಮಂ ।
ಬರಂ ವಿಯತ್ ಖಂ ವಿಹಾಯಸಂ ಗಗನಂ ಪು ॥
ಷ್ಕರಮಾಕಾಶಂ ನಭಮಂ ।
ತರಿಕ್ಷಮಂಭೋದಮಾರ್ಗಮಭ್ರಂ ವ್ಯೋಮಂ ॥ ೨೭ ॥

ಸ್ತನಯಿತ್ನು ವಾರಿವಾಹಂ ।
ಘನಾಘನಂ ಧೂಮಯೋನಿ ಮೇಘಂ ಜಲದಂ ॥
ಘನಮಂಬುಧರಂ ಸೌದಾ ।
ಮಿನಿ ವಿಷಮಭ್ರಂ ಬಳಾಹಕಂ ಜೀಮೂತಂ ॥ ೨೮ ॥

ಕಂ॥ ಉದ್ಯತ್ಸೌದಾಮಿನಿಯೊಳೆ ।
ಭಿದ್ಯೋತಿಸುಗುಂ ಸಮಾನಗತಿಯಿಂ ಚಪಳಾ ॥
ವಿದ್ಯುತ್ಕ್ಷಣಿಕಾ ತಟಿದಚಿ ।
ರದ್ಯುತಿ ಶಂಪಾಶತಹ್ರದಾಹ್ರಾದಿನಿಗಳ್ ॥ ೪೯ ॥

ಘನಸಂತತಿ ಕಾದಂಬಿನಿ ।
ಘನನಿರ್ಮುಕ್ತೋಪಳಂಗಳವು ಕರಕಂಗಳ್ ॥
ಘನನಿರ್ಘೋಷಂ ಸ್ತನಿತಂ ।
ಘನಸಂಭೂತಾಗ್ನಿ ತಾನಿರಮ್ಮದಮಕ್ಕುಂ ॥ ೫೦ ॥

ಓರಂತೆ ಮುಚ್ಚಿ ಮುಸುಕಿದ ।
ಧಾರಾಧರಮಾದ ದುರ್ದಿನಂ ಘನತಿಮಿರಂ ॥
ಧಾರಾಸಂಪಾತಮದಾ ।
ಸಾರಂ ವಾತಾಸ್ತವಾರಿ ಶೀಕರಮಕ್ಕುಂ ॥ ೫೧ ॥

ಕಱಿವ ಮೞಿ ವೃಷ್ಟಿ ವರ್ಷಂ ।
ಬಱಿದಿರ್ದ್ದುದವಗ್ರಹಂ ಸಿಡಿಲ್ದು ಸಿಡಿಲ್ಬಂ ॥
ದೆಱಿವುದು ವಿಸ್ಫೂರ್ಜಂ ಕಿ ।
ಕ್ಕಿಱಿಗಿಱಿದ ಮುಗಿಲ್ಗಳಿಲ್ಲದಿರವು ನಿರಭ್ರಂ ॥ ೫೨ ॥

ತಿಮಿರಂ ಸಂತಮಸಂ ಧ್ವಾಂ ।
ತಮಂಧಕಾರಂ ತಮಂ ತಮಿಸ್ರ ಮದಕ್ಕುಂ ॥
ಸಮುದಿತಘನಬಹುಳತಮಂ ।
ತಮಿಸ್ರ ಮಂತಂಧತಮಸಮಕ್ಕುಂ ಪೆಸರಿಂ ॥ ೫೩ ॥

ಮ॥ಸ್ರ॥ ರವಿ ಮಾರ್ತಂಡಂ ಪತಂಗಂ ತಪಿ ತಪನ ನಿನಂ ಭಾನು ಪೂಷಂ ಸಹಸ್ರಾಂ ।
ಶು ವಿವಸ್ವಂತಂ ಖಗಂ ಭಾಸ್ಕರನಹಿಮಕರಂ ಸೂರ್ಯನಂಭೋಜಮಿತ್ರಂ॥
ದಿವಸೇಂದ್ರಂ ಬ್ರಧ್ನ ನಂಶು ಗ್ರಹಪತಿ ಹರಿದಶ್ವಂ ತಮೋವೈರಿ ಹಂಸಂ ।
ಸವಿತಾರಂ ಸೂರ ನರ್ಕಂ ದ್ಯುಮಣಿ ತರಣಿ ಸಪ್ತಾಶ್ವ ನಾದಿತ್ಯನಕ್ಕುಂ
॥ ೫೪ ॥

ಕಂ॥ ಕಿರಣಂ ದ್ಯುತಿ ರುಗ್ದೀಧಿತಿ ।
ಮರೀಚಿ ರುಚಿ ರೋಚಿ ಶೋಚಿ ದೀಪ್ತಿ ಮಯೂಖಂ ॥
ಕರ ಮುಸ್ರ ಮಂಶು ಭಾ ಭಾ ।
ನು ರಶ್ಮಿ ಘೃಣಿ ವಸು ಗಭಸ್ತಿ ಪಾದಂ ತೇಜಂ ॥ ೬೫ ॥

ಖರತಿಗ್ಮತೀಕ್ಷ್ಣಚಂಡೋ ।
ಷ್ಣರೌದ್ರ ಘುವರ್ಮಾಂಶು ವೆನೆಯು ಮಱಿಗಹಿಮಕರಂ ॥
ಪರಿಧಿ ಯುಪಸೂರ್ಯಕಂ ತ ।
ತ್ಪರಿವೇಷಂ ತತ್ಪ್ರಕಾಶ ಮಾತಪಮಕ್ಕುಂ ॥ ೬೬ ॥

ವಿಧು ಚಂದ್ರಂ ರಜನಿಕರಂ ।
ಸುಧಾಂಶು ಮೃಗಲಕ್ಷ್ಮ ನಿಂದು ಹಿಮರಶ್ಮಿ ಕಳಾ ॥
ನಿಧಿ ಸೋಮ ನಮೃತಮಯ ನೋ ।
ಷಧೀಶ್ವರಂ ಕುಮುದಬಂಧು ತಾರಾಧೀಶಂ ॥ ೬೭ ॥

ಮಹಿತಾವಶ್ಯಾಯ ತುಷಾ ।
ರ ಹಿಮ ಪ್ರಾಲೇಯ ತುಹಿನ ನೀಹಾರಕರಂ ॥
ಮಹಿತಾತ್ರಿನೇತ್ರಜಂ ಧ್ವಾಂ ।
ತಹರಂ ದ್ವಿಜರಾಜ ನರ್ಣವಪ್ರಿಯತನಯಂ ॥ ೬೮ ॥

ಅಂಕಂ ಲಕ್ಷಣ ಮದುವೆ ಕ ।
ಳಂಕಾಭಿಜ್ಞಾನ ಚಿಹ್ನ ಲಾಂಛನ ಲಕ್ಷ್ಮಾ ॥
ಖ್ಯಂ ಕುಱಿಪದೆನಿಸುಗುಂ ಹರಿ ।
ಣಾಂಕಾದಿಪದಪ್ರಯೋಗದಿಂ ಶಶಿನಾಮಂ ॥ ೬೯ ॥

ಬಿಂಬಂ ವಳೆಯಂ ಮಂಡಳ ।
ಮೆಂಬಿವಭಿನ್ನಾರ್ಥಮರ್ಧದಳಖಂಡಾಖ್ಯಂ ॥
ತಾಂ ಖಗೆಯ ಶಕಲಮದು ಶಶಿ ।
ಬಿಂಬಾರ್ಧಕ್ಕರ್ಧಚಂದ್ರ ನೆನೆ ಪೆಸರ್ವಡೆಗುಂ ॥ ೭೦ ॥

ಕಂ॥ ಉಪರಾಗಂ ಗ್ರಹಣಂ ಗ್ರಹ ।
ಮುಪಪ್ಲವಂ ರಾಹುಪೀಡೆ ಯಕ್ಕುಂ ಜ್ಯೋತ್ಸ್ನಾ ॥
ಭ್ಯುಪದೇಶಂಗಳ್ ಚಂದ್ರಾ ।
ತಪಮುಂ ಚಂದ್ರಿಕೆಯುಮೆಸೆವ ತತ್ಕೌಮುದಿಯುಂ ॥ ೭೧ ॥

ಕ್ಷಿತಿತನಯಂ ವಕ್ರಂ ಲೋ ।
ಹಿತಾಂಗ ನಂಗಾರಕಂ ಕುಜಂ ಭೌಮಂ ಸೋ ॥
ಮತನೂಭವಂ ಬುಧಂ ಜ್ಞಂ ।
ಪ್ರತೀತಿ ಮಿಗೆ ನೆಗಳ್ದ ರೌಹಿಣೇಯಂ ಸೌಮ್ಯಂ ॥ ೭೨ ॥

ಅಂಗಿರಸ ಸುರೇಜ್ಯಂ ಧಿಷ ।
ಣಂ ಗೀಃಪತಿ ದಿವಿಜಮಂತ್ರಿ ವಾಚಸ್ಪತಿ ಮ ॥
ತ್ತಾಂಗಿರಸಂ ವಾಕ್ಪತಿ ಜೀ ।
ವಂ ಗುರು ವೆಂಬಿನಿತು ಮಿವು ಬೃಹಸ್ಪತಿನಾಮಂ ॥ ೭೩ ॥

ದನುಜರ ಗುರು ಕವಿ ಸಿತ ಭೃಗು ।
ತನೂಭವಂ ಕಾವ್ಯ ನುಶನಸಂ ಭೃಗು ಶುಕ್ರಂ ॥
ಶನಿ ಮಂದ ನರ್ಕಿ ನೀಲಂ ।
ಶನೈಶ್ಚರಂ ಶೌರಿ ಪಂಗು [ಕಾಳಂ] ಕ್ರೋಡಂ ॥ ೭೪ ॥

ಭಾನುರಿಪು ಸಿಂಹಿಕಾಪ್ರಿಯ ।
ಸೂನು ತಮಂ ರಾಹು ಗಗನಚರಭುಜಗಂ ಸ್ವ ॥
ರ್ಭಾನು ವಿಧುಂತುದ ನಂತದು ।
ತಾನಕ್ಕುಂ ಕೇತು ನಾಮದಿಂ ಶಿಖಿ ಯೆನಿಕುಂ ॥ ೭೫ ॥

ಚಿತ್ರಶಿಖಂಡಿಗಳೆನಿಸಿದ ।
ರಾತ್ರಿದಶಮುನೀಶರೇೞ್ವರುಂ ವಿನಮಿತಲೋ ॥
ಕತ್ರಿತಯರ್ ಪುಲಹಮರೀ ।
ಚ್ಯತ್ರಿವಸಿಷ್ಠಾಂಗಿರಃಪುಲಸ್ತ್ಯಕ್ರತುಗಳ್ ॥ ೭೬ ॥

ಕಂ॥ ನಿರುಪಮಚರಿತ್ರದಿಂ ಮಿ ।
ಕ್ಕರುಂಧತಿ ವಸಿಷ್ಠನಂಗನೆ [ತಾಂ] ವೆಸ್ಸಿತ್ತು ॥
ವರುಣಿ ಯಗಸ್ತ್ಯನ ಸಾಧ್ವಿ [ಯೆ ।
ವರ] ಲೋಪಾಮುದ್ರೆ ತನ್ಮುನೀಶ್ವರವಧುಗಳ್ ॥ ೭೭ ॥

ರಿಕ್ಷ ಮುಡು ತಾರೆ ತಾರಗೆ ।
ನಕ್ಷತ್ರಂ ಜ್ಯೋತಿ ತಾರಕಂ ಭಂ [ಧಿಷ್ಣ್ಯಂ] ॥
ದಾಕ್ಷಾಯಣಿಗಳವೆಂದುಪ ।
ಲಕ್ಷಿಸುಗಂತವಱೊಳಶ್ವಿನೀಪ್ರಭೃತಿಗಳಂ ॥ ೭೮ ॥

ಸಂದಿರ್ದಶ್ವಿನ ಮಶ್ವಯು ।
ಗೆಂದಕ್ಕುಂ ಬೇಱೆ ದೊಂದುಗುಣನಾಮಂ ಮ ॥
ತ್ತೊಂದಿರೆ ನೆಗೞ್ಗುಂ ಕೃತ್ತಿಗೆ ।
ಯೊಂದಱೊಳೆಂದೊಱೆಗೆ ಬಂದ ಬಹುಳಾಖ್ಯಾನಂ ॥ ೭೯ ॥

ಮೃಗಶೀರ್ಷ ಮಗ್ರಹಾಯಣಿ ।
ಮೃಗಶಿರದ ಪೆಸರ್ ತದಗ್ರದೇಶಸ್ಥಿತ ತಾ ॥
ರೆಗಳಿಲ್ವಲಂಗಳೆನಿಕುಂ ।
ನೆಗೞ್ದಾರ್ದ್ರೆಗೆ ಲುಬ್ಧಕಾಹ್ವಯಂ ವರ್ತಿಸುಗುಂ ॥ ೮೦ ॥

ಎರಡುಂ ಭಾದ್ರಪದರ್ಕ್ಷಾಂ ।
ತರಂಗಳೆಂ ಪ್ರೋಷ್ಠಪದೆ ಯೆನಿಕ್ಕುಂ ಸಂಜ್ಞಾಂ ॥
ತರಮಱೆಗೆ ತ[ಧ್ವ ನಿಷ್ಠೆಗೆ] ।
ಪರಂ ಶ್ರವಿಷ್ಠಾಖ್ಯೆ ತಿಷ್ಯಮಕ್ಕುಂ ಪುಷ್ಯಂ ॥ ೮೧ ॥

ಇಂತು

ಸ್ವರ್ಗವರ್ಗಂ



# ಶ್ರೀ ವೀತರಾಗಾಯ ನಮಃ.

—ನಮಸ್ಸಿದ್ಧೇಭ್ಯಃ—



ಕಂ॥ ಸಮಯಮನೇಹಂ ಕಾಲಂ ।
ನಿಮೇಷಕಾಷ್ಠಾದಿ ತದ್ವಿಶೇಷಮದೆನಿಕುಂ ॥
ಸಮರಾತ್ರಿಂದಿವಮಾಗಿರೆ ।
ಸಮನಿಸುಗುಂ [ವಿಷುವ] ವಿಷುವದಾಖ್ಯೆಗಳೆ [ರಡುಂ] ॥ ೧ ॥

ಹದಿನೆಂಟು ನಿಮೇಷದಿ ನಂ ।
ತದೊಂದು ತಾಂ ಕಾಷ್ಠೆ ಕಾಷ್ಠೆ ಮೂವತ್ತಾಱಿಂ ॥
ದದು ಕಳೆ ಕಳೆಗಳ್ ಮೂವ ।
ತ್ತದು ಕ್ಷಣಂ ಕ್ಷಣಮದಾಱು ಘಱಿಗೆ ಯೆನಿಕ್ಕುಂ ॥ ೨ ॥

ಅವಱಿರಡೆರಡಂ ಕೊಂಡೊಡೆ ।
ಬವಱಿಸುವ ಮುಹೂರ್ತಮಂತದೊಂದಕ್ಕುಂ ಮ ॥
ತ್ತವು ಮೂವತ್ತಱಿನೊಂದೊಂ ।
ದೆ ವಲಂ ವರ್ತಿಸುಗುಮಂತಹೋರಾತ್ರಂಗಳ್ ॥ ೩ ॥

ದಿವಸಂ ದಿನಂ ದಿವಾಹಂ ।
ದ್ಯು ವಾಸರಂ ಘಸ್ರಮೆನೆ ಪಗಲ್ ಪ್ರತ್ಯೂಷಂ ॥
ದಿವಸಮುಖಂ ಪ್ರಾತಃ ಕಾ ।
ಲ್ಯಮುಷಃಸಮಯಂ ಪ್ರಭಾತಮದು ಗೋಸರ್ಗಂ ॥ ೪ ॥

ತಮಿ ವಾ[ಸತೇಯಿ] ಶರ್ವರಿ ।
ತಮಿಸ್ರೆ ನಿಶೆ ರಜನಿ ದೋಷೆ ರಾತ್ರಿ ಕ್ಷಣದಾ ॥
ಸಮಭಿಖ್ಯೆ ವಿಭಾವರಿ ನ ।
ಕ್ತ ಮುಷೆ ಯಿರುಳ್ ತಾಂ ತ್ರಿಯಾಮ್ಯೆ ಯಾಮಿನಿಯಕ್ಕುಂ ॥ ೫ ॥

ಕಂ॥ ರಾತ್ರಿಯ ಮುಖಂ ಪ್ರದೋಷಂ ।
ರಾತ್ರಿಯೊಳೆಂ ಮಧ್ಯರಾತ್ರಿ ಯುಱಿಗೆ ನಿಶೀಥಂ ॥
ರಾತ್ರಿವಿರಾಮಂ ವ್ಯುಷ್ಟಂ ।
ರಾತ್ರಿಗಳೆವು ಪಲವುಮಾಗೆ ಗಣರಾತ್ರಂಗಳ್ ॥ ೬ ॥

ಪ್ರತಿಪತ್ಪಕ್ಷತಿ ನಾಮ ।
ದ್ವಿತೆಯಂ ಪಾಡಿವಮುದಾದಿಯೆನೆ ತಿಥಿ ಪಕ್ಷ ॥
ಸ್ಥಿತಿಯೊಳ್ ಪದಿನೆಯ್ದಕ್ಕುಂ ।
ಪತಿಪತ್ಪಕ್ಷಾಂತಸಂಧಿ ಪರ್ವಮೆನಿಕ್ಕುಂ ॥ ೭ ॥

ಸ್ಪಷ್ಟಂ ಸೂರ್ಯೇಂದುಸಮಾ ।
ಶ್ಲಿಷ್ಟ ಮಮಾವಾಸೆ ಯೆಂಬುದಕ್ಕುಂ ದರ್ಶಂ ॥
ದೃಷ್ಟೇಂದು ಸಿನೀವಾಲಿ ವಿ ।
ನಷ್ಟೇಂದು ಕುಹೂಸಮಾಖ್ಯಮದು ತಾನಕ್ಕುಂ ॥ ೮ ॥

ಅನುಮತಿ ಯೆನಿಕುಂ ಪೂರ್ಣಿಮೆ ।
ಯೆನಿಸಾನುಂ ಕುಂದಿ ತೋಱುತಿರೆ ಚಂದ್ರಂ ನೆ ॥
ಟ್ಟನೆ ನೆಱಿದು ಬಿಂಬದಿಂ ಪೂ ।
ರ್ಣನಾಗೆ ರಾಕಾಖ್ಯೆ ಪೌರ್ಣಮಾಸಿ ಯುದಕ್ಕುಂ ॥ ೯ ॥

ಮೂವತ್ತು ದಿವಾರಾತ್ರಂ ।
ತೀವಿದೊಡದು ಮಾಸ ಮೆರಡುಮಾಸಂ ಋತುವಂ ॥
ತಾವವು ಮತ್ತಾಱಾಗೆ ಕ ।
ಳಾವೇದಿಗಳೆಂತದೊಂದು ವತ್ಸರಮೆಂಬರ್ ॥ ೧೦ ॥

ಸಮತೀತಾಬ್ದಂ ಪರುದಾ ।
ಬ್ಯಮದಕ್ಕುಂ ತಾಂ ಪರಾರಿ ತತ್ಪೂರ್ವಗತಂ ॥
ಸಮನಿಸೆ ಸಾಂಪ್ರತಿಗಂ ವ ।
ರ್ತಮಾನ ಮುಪ್ಪಬ್ದ ಮೈಷಮಂ ಪೆಸರಿಂದಂ ॥ ೧೧ ॥

ಅಕ್ಕರ ವೃತ್ತ॥
ಕ್ರಮದೊಳೊಂದಿರೆ ಮಧು ಮಾಧವಂ ಶುಕ್ರಂ ಶುಚಿ ನಭೋಮಾಸಂ ನಭಸಾಖ್ಯಮು।
ತ್ತಮಿಷ ಮೂರ್ಜಂ ಸಹಃಸಹಸ್ಯಂಗಳ್ ತಪಮುಂ ತಪಸ್ಯ ಮೆಂದಿಂತು ॥
ಸಮನಿಕ್ಕುಂ ಚೈತ್ರಾದಿನಾಮಂಗಳ್ ವಸಂತಂ ಗ್ರೀಷ್ಮಂ ಪ್ರಾವೃಟ್ಟರ ।
ತ್ಸಮಯಂ ಹೇಮಂತಂ ಶಿಶಿರ ಮೆಂಬಂತವು ತಾವಕ್ಕುಂ ಋತುಗಳ್ ಮತ್ತಾಱುಂ ॥ ೧೨ ॥

ಕಂ॥ ಸುರಭಿ ವಸಂತಕ್ಕಾಖ್ಯಾಂ ।
ತರಂ ನಿದಾಘಂ ತಪಾಹ್ವಯಂ ಗ್ರೀಷ್ಮಂ ವಾ ॥
ರ್ಧರಸಮಯಂ ವರ್ಷಾಋತು ।
ವೆರಡುಂ ಪ್ರಾವೃಡ್ವಿಶೇಷಸಂಜ್ಞೆಗಳಕ್ಕುಂ ॥ ೧೩ ॥

ಶರದಬ್ದ ಸಮಂ ಸಂವ ।
ತ್ಸರ ಹಾಯನ ವತ್ಸರಂಗಳವು ವರ್ಷಂಗಳ್ ॥
ನರರೊಂದು ತಿಂಗಳೆದು ಪಿತೆ ।
ರರ ದಿವಸಂ ಬರಿಸ ಮೊಂದು ದೇವೀಯದಿನಂ ॥ ೧೪ ॥

ಒಂದಕ್ಕುಂ ಬ್ರಹ್ಮಾಹಂ ।
ಸಂಧಿ [ಸಿ] ನಿಲೆ ದಿವ್ಯಯುಗಸಹಸ್ರದ್ವಯಮೋ ॥
ರೊಂದೆ ವಲಂ ಮನ್ವಂತರ ।
ಮೆಂದಱಿವುದು ನಿಯತಮೇಕಸಪ್ತತಿಯುಗದಿಂ ॥ ೧೫ ॥

ಪರಿವರ್ತಿಸೆ ದಶಗುಣದಿಂ ।
ಬರಿಸಂಗಳ್ ನಾಲ್ಕುಲಕ್ಕೆಯುಂ ದ್ವಾತ್ರಿಂಶ ॥
ತ್ಪರಿಮಿತ ಸಹಸ್ರಯುಗದಿಂ ।
ಪರಿಕಲ್ಪನಮಕ್ಕುಮಾಗತಿ ವಜ್ಞಾವಳಿಂದಂ? ॥ ೧೬ ॥

ಲಯಸಮಯಂ ಸಮಸಂಸು ।
ಪ್ತಿ ಯುಗಾಂತಂ ವಿಳಯ ಮಂತಕಾಲಂ ಕಲ್ಪಂ ॥
ಕ್ಷಯ ಮುಪಸಂಹೃತಿ (ಸಗಾರ್ ।
ತ್ಯಯಂ) ಮಹಾಪ್ರಳಯ ಮೆಂಬುದದು ಸಂವರ್ತಂ ॥ ೧೭ ॥

ಕಂ॥ ಉತ್ತರ ಕಾಲಮುದಾಯತಿ ।
ಮುತ್ತೆ ತದಾತ್ವಂ ತದಾತನಂ ತತ್ಕಾಲಂ ॥
ವೃತ್ತಂ ಭೂತಂ ಕ್ರಿಯೆಗುಪ ।
ಪತ್ತಿಯೊಳೊಡನೆಸಲ್ವುದೇಕಕಾಲಂ ಯುಗಪತ್ ॥ ೧೮ ॥

ಇಂತು
ಕಾಲವರ್ಗಂ

# ಶ್ರೀ ವೀತರಾಗಾಯ ನಮಃ.

೧ ಅವಿಭಿನ್ನಾರ್ಥ ಕಾಂಡಂ. ೩. ಸಂಸರಣ ವರ್ಗಂ.

ಕಂ॥ ಭುವನಂ ಲೋಕಂ ವಿಷ್ಟಪ ।
ಮಿವು ಜಗದೊಳಭಿನ್ನವೃತ್ತಿಯಿಂದಂ ನೆಗಳ್ಗುಂ ॥
ಭವ ಸಂಸೃತಿ ಸಂಸರಣಂ ।
ಜವಂಜವಂ ಜನ್ಮ ಮೆಂಬುದದು ಸಂಸಾರಂ ॥ ೧ ॥

ಸ್ಥಾವರಮೆನೆ ಪಡೆಗುಂ ಪೃ ।
ಥ್ವೀವಿಟಪಿಶಿಲೋಚ್ಚಯಾದಿಕಂ ತ್ರಸಮಕ್ಕುಂ ॥
ಜೀವನಿಕಾಯಂ ಜಂಗಮ ।
ಮಾವಿರ್ಭೂತಪ್ರಧಾನಚೈತನ್ಯಗುಣಂ ॥ ೨ ॥

ಜನನಂ ಜನ್ಮಂ ಪ್ರಸವಂ ।
ಜನಿ ಜನು ರುತ್ಪತ್ತಿ ಸೂತಿ ಯೇಕಾರ್ಥಮಿವಿಂ ॥
ತನಿತುಂ ಕ್ಷೇತ್ರಜ್ಞಂ ಜೀ ।
ತನ ನಾತ್ಮಂ ಪ್ರಾಣಿ ಜಂತು ದೇಹಿ ಯೆನಿಕ್ಕುಂ ॥ ೩ ॥

ದಿವಿಜರುಪಪಾದುಕರ್ ಮಾ ।
ನವಪಶುನಿವಹಂ ಜರಾಯುಜಂ ಫಣಿವಿಹಗಾ ॥
ದ್ಯವವೆಲ್ಲಮಂಡಜಂ ಶೇ ।
ಷವಪ್ಪುವಿಂತೆಂತೆಪುದ್ಭಿದಂಗಳೆನಿಕ್ಕುಂ ॥ ೪ ॥

ಕಂ॥ ಪಾತಾಳಂ ದನುಜೇಂದ್ರನಿ।
ಕೇತ ಮಧೋಭುವನ ಮುರಗಲೋಕಂ ರಸೆ ವಿ॥
ಖ್ಯಾತೆ ಬಡೆವಾಮುಖಂ ಸುತ।
ಳಾತಳವಿತಳಾದಿಸಪ್ತತಳಸಂಬಂಧಂ ॥ ೫ ॥

ಅವಟಂ ಛಿದ್ರಂ ಕುಹರಂ।
ವಿವರಂ ಶ್ವಭ್ರಂ ಬಿಲಂ ದರಂ ರಂಧ್ರಂ ಗ॥
ರ್ತ ವವೇಕಾರ್ಥಂಗಳ್ ನಾ।
ಕು ವಾಮಲೂರಾಹ್ವ ವಹಿಗೃಹಂ ವಲ್ಮೀಕಂ ॥ ೬ ॥

ಮ॥ ಉರಗಂ ಭೋಗಿ ಸರೀಸೃಪಂ ಫಣಿ ಭುಜಂಗಂ ಚಕ್ರಿ ದರ್ವೀಕರಂ।
ಹರಿಯುಂ ಕುಂಡಲಿ ಕಾದ್ರವೇಯ ನಹಿ ನಾಗಂ ವ್ಯಾಳ ನಾಶೀವಿಷಂ॥
ಪುರುಷ್ಪೃಷ್ಮಂ ಫಣಭೃತ್ಪೃದಾಕು ಭುಜಗಂ ಕುಂಭೀನಸಂ ಪನ್ನಗಂ।
ಮರುದಾಶಂ ಶನಿ ಗೂಢಪಾದ್ವಿಷಧರಂ ಸರ್ಪಂ ದ್ವಿಜಿಹ್ವಾಹ್ವಯಂ॥
॥ ೭ ॥

ಕಂ॥ ಉರಗವಿಷವಿಷಮದಂಷ್ಟ್ರಂ।
ಕುರ ವೂಶಿ ಯುರಗದ ಕಾಯ ವಂತದು ಭೋಗಂ॥
ಗರಲಂ ನಂಜು ವಿಷಂ ಗರ।
ಮೆರೆ ನಿರ್ಮೋಕಂ ಫಣಾಹ್ವಯಂ ಪೆಡೆಯಕ್ಕುಂ ॥ ೮ ॥

ಗೋನಾಸ ನಜಗರಂ ಶಯು।
ತಾನಂತದು ಡುಂಡುಭಂ ಜಳವ್ಯಾಳಾಖ್ಯಂ॥
ನಾನಾವಿಕಲ್ಪವಿಷವಿ।
ದ್ಯಾನಿಪುಣಂ ಜಾಂಗುಲಿಕ ನೆನಿಕ್ಕುಂ ಭಿಷಜಂ ॥ ೯ ॥

ದಾರದ ರಸ ಪ್ರದೀಪನ।
ಸೌರಾಷ್ಟ್ರಿಕ ಶೌಕ್ಲಿಕೇಯ ತೀಕ್ಷ್ಣಮೆನಲ್ ಸಾ॥
ಧಾರಣದಿಂ ನೆಗೞ್ಗಮತಿ।
ಕ್ರೂರಸ್ಥಾವರವಿಷಪ್ರಭೇದಮನಿತ್ತುಂ ॥ ೧೦ ॥

ಕಂ॥ ನಿರಯಂ ಶ್ವಭ್ರಂ ದುರ್ಗತಿ ।
ನರಕಂ ತಜ್ಜನ್ಮಿ ನಾರಕಂ ಯಾತ್ಯೆ ನವಂ ॥
ದುರಿತವಿಪಾಕಂ ಯಾತನೆ ।
ಗುರುವೇದನೆ ದುಃಖ ಮಾರ್ತಿ ಪೀಡೆ ಯಸಾತಂ ॥ ೧೧ ॥

ದುರಿತಂ ಪಾಪ ಮಧರ್ಮ ।
ಸ್ವರೂಪಮಘ ಮಂಹಮೇನಸಂ ವೃಜಿನಂ ದು ॥
ಶ್ಚರಿತಂ ಕಿಲ್ಬಿಷ ಮಯುಶ ।
ಸ್ಕರ ಮಶುಭಂ ನಾರಕಂ ಮಳಂ ದುಷ್ಕರ್ಮಂ ॥ ೧೨ ॥

ಭವಿತವ್ಯತೆ ಭಾಗ್ಯಂ ಪು ।
ಣ್ಯ ಮಯಂ ಶ್ರೇಯಂ ವೃಷಂ ಸುಕರ್ಮಂ ಧರ್ಮಂ ॥
ವಿವಿಧವ್ರತೋಪವಾಸಾ ।
ದಿವಿಕಲ್ಪಂ ತತ್ಫಲಂ ಸುಖಂ ಶಂ ಶರ್ಮಂ ॥ ೧೩ ॥

ಉಪಚಾರಂ ಸೇವನೆ ಪ ।
ರ್ಯ್ಯುಪಾಸ್ಯೆ ವರಿವಸ್ಯೆ ಭಕ್ತಿ ಶುಶ್ರೂಷಾರ್ಥಂ ॥
ಉಪಹಾರಂ ಬಲಿಕರ್ಮಂ ।
ಸಪರ್ಯೆ ಪೂಜಾಭಿಧಾನ ಮರ್ಚನೆ ಯಕ್ಕುಂ ॥ ೧೪ ॥

ಪ್ರತಿರೂಪಂ ಪ್ರತಿಬಿಂಬಂ ।
ಪ್ರತಿಮಾ ಪ್ರತಿಯಾತನಾಪ್ರತಿಚ್ಛಂದಂಗಳ್ ॥
ಪ್ರತಿಮಾನಂ ಪ್ರತಿಕಾಯಂ ।
ಪ್ರತಿನಿಧಿ ಯೆಂದಿವೆ ಸರೂಪವಾಚಿಗಳೆನಿಕುಂ ॥ ೧೫ ॥

ದೈವಪ್ರತಿಕೃತಿಗಳ್ಗೆ ।
ಚಾರ್ಚಾವಚನಾಭಿಖ್ಯೆ ಸೂರ್ಮಿಯೆನೆ ನೆಗಱ್ಗುಂ ನಾ ॥
ನಾವಿಧಲೋಹಮಯಪ್ರತಿ ।
ಮಾವಳಿಗಳ್ ಹರಿಣಿ ಹೇಮಮಯಿ ತಾನಕ್ಕುಂ ॥ ೧೬ ॥

ಕಂ॥ ಊಹಂ ತರ್ಕಂ ಚರ್ಚೆವಿ ।
ಮೋಹ ಮವಿದ್ಯಾಪ್ರಭಾವ ಮಪರತಜಂತು ॥
ದ್ರೋಹಂ ಧರ್ಮಂ ಸಂಯಮ ।
ಮಾಹಿತಸರ್ವೇಂದ್ರಿಯಪ್ರವೃತ್ತಿನಿರೋಧಂ ॥ ೧೭ ॥

ಜ್ಞಾನಂ ಮೋಕ್ಷಾಧಿಗಮ ಮ ।
ನೂನಕಳಾಶಿಲ್ಪಶಾಸ್ತ್ರಕೌಶಳ ಮದು ವಿ ॥
ಜ್ಞಾನಂ ಸಮಾಧಿ ಸಂಪ್ರಣಿ ।
ಧಾನಂ ತತ್ವಾದಿಚಿಂತನಂ ತಾಂ ಧ್ಯಾನಂ ॥ ೧೮ ॥

ಅಪವರ್ಗಂ ನಿಶ್ರೇಯಸ ।
ಮಪುನರ್ಭವ ಮಮೃತ ಮಕ್ಷರಂ ಮೋಕ್ಷಂ ಮು ॥
ಕ್ತಿಪದಂ ಬ್ರಹ್ಮಂ ಕೈವ ।
ಲ್ಯಪದವಿ ಶಿವಗತಿ ನಿರಾಮಯಂ ನಿರ್ವಾಣಂ ॥ ೧೯ ॥

ತ್ರಿಪದಿ ॥ ಧ್ರುವಂ ಸನಾತನಂ ನಿತ್ಯ ಮವಿನಶ್ವ ।
ರ ಮಪ್ರತಿಚ್ಯವ ಶಾಶ್ವತ ಸ್ಥಾ ॥
ನ ಮೆಮಗಕ್ಕೆ ನಿರಾಕುಳಂ ॥ ೨೦ ॥

ಇಂತು

—ಸಂಸರಣವರ್ಗಂ—



# ಶ್ರೀ ವೀತರಾಗಾಯನಮಃ.

೧ ಅವಿಭಿನ್ನಾರ್ಥಕಾಂಡಂ. ೪ ಸಲಿಲವರ್ಗಂ.

ಮ॥ ಸಲಿಲಂ ಜೀವನಮಂಬು ತೋಯ ಮುದಕಂ ಪಾಥಂ ಕುಶಂ ವಾರಿ ಕೋ।
ಮಳೆ ಮರ್ಣಂ ಭುವನಂ ದಕಂ ಘನರಸಂ ನೀರಂ ಶರಂ ಪುಷ್ಕರಂ ॥
ಜಲ ವಾಪಂ ವಿಷ ಮಂಭಸಂ ಕ ಮಮೃತಂ ಪಾನೀಯ ಮೆಂದಿಂತನಾ ।
ಕುಳದಿಂದಂ ತಱಿಸಲ್ಕೆ ನೀರ್ಗೆ ಪೆಸರಂ ಪರ್ಯ್ಯಾಯದಿಂ ವಾಗ್ವಿದರ್ ॥ ೧ ॥

ಕಂ॥ ಸರಿದಧಿನಾಥಂ ರತ್ನಾ ।
ಕರ ಮಬ್ಧಿ ಸಮುದ್ರ ಮರ್ಣವಂ ಜಲನಿಧಿ ಸಾ ॥
ಗರ ಮಂಬುರಾಶಿ ಪನ್ನಗ ।
ಶರಣ ಮಕೂಪಾರ ಮುದಧಿ ಪಾರಾವಾರಂ ॥ ೨ ॥

ಭಂಗಂ ಲಹರಿಕೆ ವೀಚಿ ತ ।
ರಂಗಂ ಲಳಿ ಯೆಂಬಿವೂರ್ಮಿಪರ್ಯ್ಯಾಯಂಗಳ್ ॥
ತುಂಗತರಂಗಂ ಕಲ್ಲೋ ।
ಲಂಗಳವುತ್ಕಲಿಕೆ ಯೆಂಬಿವಕ್ಕುಂ ಕಡಲೊಳ್ ॥ ೩ ॥

ವನರಾಶಿಯೊತ್ತುವೇಳೆಯ ।
ದೆನಿಕುಂ ವೇಳಾವನಂ ತದುಪಕಂಠವನಂ ॥
ಘನತರಫೇನಂ ಡಿಂಡೀ ।
ರನಾಮ ಮಂಭಶ್ಚರೋಗ್ರಸತ್ವಂ ಯಾದಂ ॥ ೪ ॥

ಮೀನಂ ಶಫರಂ ತಿಮಿ ಪಾ ।
ಠೀನಂ ಝುಷ ಮನಿಮಿಷಂ ವಿಶಾರಂ ಮತ್ಸ್ಯಂ ॥
ಮೀನಪೆಸರ್ ತದ್ಭೇದಮ ।
ನೂನತಿಮಿತಿಮಿಂಗಿಳಾದಿಪೃಥುರೋಮಂಗಳ್ ॥ ೫ ॥

ಕಂ॥ ಎಳೆವಿಾಂಗಳ್ ಶಕುಲಂಗಳ್ ।
ನಳೆವಿಾನಂ ಚಿಲಿಚಿಮಾಭಿಧಾನಮದಕ್ಕುಂ ॥
ಚಳುಕಿಯೆನೆ ಶಿಂಶುಮಾರಂ ।
ಕುಳೀರ ಮದು ಕರ್ಕಿ ತರ್ಕಿಸಲ್ ಕರ್ಕಟಕಂ ॥ ೬ ॥

ಅವಹಾರಂ ಗ್ರಾಹಂ ನ ।
ಕ್ರಮಾಚಿ ಕುಂಭೀರಮುಗ್ರತಿಮಿಮಕರಂ ಕೂ ॥
ರ್ಮಮದರ್ಱಿಗೆ ಕಚ್ಛಪಂ ಕಮ ।
ಠ ಮೆಂಬುದಕ್ಕುಂ ತದೀಯವಧು ಢುಲಿ ಯೆನಿಕುಂ ॥ ೭ ॥

ಭೇಕಂ ಶಾಲೂರಂ ಮಂ ।
ಡೂಕಂ ವರ್ಷಾಭು ದರ್ದುರಂ ತದ್ವಧು ಮಂ ॥
ಡೂಕಿ ಜಳೂಕಿಕೆ ಜಿಗುಳೆ ಜ ।
ಳೂಕಂ ಗಂಡೂಪದಾಖ್ಯಮದು ಕಿಂಚುಳಕಂ ॥ ೮ ॥

ಶಾಲಿನಿ॥ ಮುಕ್ತಾಸ್ಫೋಟಂ ಶುಕ್ತಿ ಶಂಬೂಕಮಂಭ ।
ಶ್ಶುಕ್ತಿಪ್ರಖ್ಯಂ ವಿದ್ರುಮಂ ತಾಂ ಪ್ರವಾಳಂ ॥
ಮುಕ್ತಾನಾಮಂ ಮೌಕ್ತಿಕಂ ಕಂಬು ಶಂಖಂ ।
ವ್ಯಕ್ತಂ ಪ್ರೋಕ್ತಂ ಕ್ಷುಲ್ಲಕಂ ಕ್ಷುದ್ರಶಂಖಂ ॥ ೯ ॥

ಕಂ॥ ನೌ ತರಣಿ ಯಾನಪಾತ್ರಂ ।
ಪೋತಂ ಪ್ರವಹಣ ಮೆನಿಪ್ಪುದರ್ಱಿಗೆ ವಹಿತ್ರಂ ॥
ಪೋತವಣಿಕ್ ಸಾಂಯಾತ್ರಿಕ ।
ನಾತಂ ತತ್ಪೋತವಾಹಿ ನಾವಿಕ ನಕ್ಕುಂ ॥ ೧೦ ॥

ಹ್ರದಿನಿ ತರಂಗಿಣಿ ನಿಮ್ನಗೆ ।
ನದಿ ಸರಿದಾಪಗೆ ಸಮುದ್ರಸತಿ ಧುನಿ ತೊಱೆ ಪ್ರೊ ॥
ರ್ದಿದ ಕಾಲ್ ತಾಂ ಕುಲ್ಯಾಹ್ವಂ ।
ಹ್ರದ ಮೆಂಬುದಗಾಧತರಜಲಾಶಯಮಕ್ಕುಂ ॥ ೧೧ ॥

ಕಂ॥ ಅವಿರತ ಮುಕ್ಕ್ರ್ಕವ ತೊಱಿಕೆ ಯೊ ।
ೞ್ಕು ವೇಗ ಮೋಘಂ ರಯಂ ಪ್ರವಾಹಂ ಸ್ರೋತಂ ॥
ಸ್ರವಣಮುಪಾಖ್ಯಂ ಕಾಷ್ಠಾಂ ।
ಝುವಾಹಿ ತಾಂ ದ್ರೋಣಿ ಸಂಗಮಂ ಸಂಭೇದಂ ॥ ೧೨ ॥

ಪೂರಂ ಪ್ರವೃದ್ಧಸಲಿಲಂ ।
ತೀರಂ ರೋಧಂ ತಟಂ ಪ್ರಪಾತಂ ಕೂಲಂ ॥
ಪಾರಂ ಪರತಟ ಮವಾರ್ ।
ಕ್ತೀರ ಮವಾರಾಖ್ಯ ಮಂತರೀಪಂ ದ್ವೀಪಂ ॥ ೧೩ ॥

ಸಲಿಲಭ್ರಮ ಮಾವರ್ತಂ ।
ಜಲಲವ ಮದು ಬಿಂದು ಪೃಷತ ವಿಪ್ರುಟ್ಸಂಜ್ಞಂ ॥
ಪುಳಿನಸ್ಥಳಿ ಸೈಕತೆ ಸಿಕ ।
ತಿಳಾಹ್ವಯಂ ಸಿಕತೆ ವಾಳುಕಾಪರ್ಯಾಯಂ ॥ ೧೪ ॥

ಸರಸಿ ಸರಂ ಕಾಸಾರಂ ।
ಸರೋಜಷಂಡಂ ತಟಾಕ ಮಾಧಾರಂ ಪು ॥
ಷ್ಕರಿಣಿ ಯದು ವಾಪಿ ದೀರ್ಘಿಕೆ ।
ಪರಿಖಾತಂ ದೇವಖಾತ ಮಕ್ಕು ಮಖಾತಂ ॥ ೧೫ ॥

ಉದಪಾನಂ ಕೂಪಂ ಪ್ರಹಿ ।
ಯದೆಂಬುದಱಿಗಂಧು ಪಲ್ವಲಂ ವೇಶಂತಂ ॥
ಉದಕೋಚ್ಛ್ವಾಸಂ ಕೋಡಿ ದ ।
ಲದು ಬಗರಗೆ ಚುಂಡಿ ಚೂತಕಂ ಚುರಿ ಪೆಸರಿಂ ॥ ೧೬ ॥

ಸ್ಥಿರಬಂಧಂ ಸೇತು ಪಯಃ ।
ಸರಣಿ ಯುದಕ್ಕುಂ ಪ್ರಣಾಳಿ ಯೂವಾಹಂ ಪ ॥
ತ್ತಿರೆ ಸಮೆದ ನಿಪಾನಂ ತಾ ।
ನರಘಟ್ಟೋದ್ಘಾಟನಂ ಘಟೀಯಂತ್ರಾಹ್ವಂ ॥ ೧೭ ॥

ಕಂ॥ ಆವಾಳೆ ಮಾಳೆವಾಳೆ ಮ ।
ದಾವಾಪಂ ವಾರಿನಿರ್ಗಮಂ ಪುಟಭೇದಂ ॥
ಶೈವಾಳಂ ಜಳನೀಳಿಕೆ ।
ಶೈವಳಮದು ನೀರೊಳಾದ ಪಾವಸೆ ಯೆನಿಕುಂ ॥ ೧೮ ॥

ಅರವಿಂದಂ ರಾಜೀವಂ ।
ಸರಸಿರುಹಂ ಸಾರಸಂ ಮಹೋತ್ಪಳ ಮಬ್ಜಂ ॥
ಖರದಂಡಂ ಕಮಳಂ ತಾ ।
ಮರಸಂ ನಳಿನಂ ಕುಶೇಶಯಂ ಶತಪತ್ರಂ ॥ ೧೯ ॥

ಪರಿಷಜ್ಜಂಬಾಳ ನಿಷ ।
ದ್ವರ ಕರ್ದಮ ಶಾದ ಪಂಕಜಂ ಪದ್ಮಂ ಮ ॥
ತ್ತರುಣಂ ಕೋಕನದಂ ಪುಂ ।
ಡರೀಕ ಮೆನಿಕುಂ ಸಿತಾಂಬುಜಂ ತಾನದಱಿಕೊಳ್ ॥ ೨೦ ॥

ಕರಹಾಟಂ ಕಂದಂ ಕೇ ।
ಸರಮದು ಕಿಂಜಲ್ಕ ಮಬ್ಜನಾಳಂ ದಂಡಂ ॥
ತರುಣಂ ಬಿಸಂ ಮೃಣಾಳಂ ।
ವರಾಳಕಂ ಬೀಜಕೋಶ ಮದು ಕರ್ಣ್ನಿಕೆಯುಂ ॥ ೨೧ ॥

ಇಂದೀವರ ಮುತ್ಪಳ ಮೆಂ ।
ಬಂದವಿಭಿನ್ನಾರ್ಥಮಸಿತವದು ಕುವಳಯಸಂ ॥
ಜ್ಞಂ ದಲ್ ಕುಮುದಂ ಕೈರವ ।
ಮೆಂದು ಸಿತೋತ್ಪಲ ವದಲ್ಲಿ ಪೇೞಲ್ಪಡುಗುಂ ॥ ೨೨ ॥

ಸಮನಿಸಿರೆ ಕೆಂಪು ಕಿಱಿದಾ ।
ನು ಮಱುಗೆ ಸೌಗಂಧಿಕಾಖ್ಯಮದೆ ಕಲ್ಹಾರಂ ॥
ಕಮಳಿನಿ ಬಿಸಜಿನಿ ಕುಮುದಿನಿ ।
ಕುಮು (ದ್ವತಿಯದುಂ) ತದೀಯಸಂಹತಿ ಷಂಡಂ ॥ ೨೩ ॥

ಇಂತು

—ಸಲಿಲವರ್ಗಂ—

# ಶ್ರೀ ವೀತರಾಗಾಯ ನಮಃ.



ಕಂ॥ ಸ್ಥಿರೆ ಧರಣಿ ಧಾತ್ರಿ ಮೇದಿನಿ ।
ಧರಿತ್ರಿ ಧರೆ ಯವನಿ ಪೃಥ್ವಿ ರಸೆ ವಸುಧೆ ವಸುಂ ॥
ಧರೆ ಕು ಮಹಿ ಜಗತಿ ವಿಶ್ವಂ ।
ಭರೆ ಗೋ ಕ್ಷ್ಮಾ ಕ್ಷೋಣಿ ಭೂಮಿ ಭೂ ಗೋತ್ರೆ ನೆಲಂ ॥ ೧ ॥

ಮರುಧನ್ವಾಹ್ವಯಮೂಷರ ।
ಮಿರಿಣಂ ಮೃತ್ಸ್ನಾಖ್ಯೆ [ಮೃತ್ಸೆ] ಮೃತ್ತಿಕೆ ಸಕ್ಷಾ ॥
ರರಸ ಮದೂಷರಮತ್ತು ।
ರ್ವರಿ ಯೆನಿಸುಗು ಮುರ್ವಿ ಸರ್ವಸಸ್ಯಸಮೃದ್ಧಂ ॥ ೨ ॥

ಆವುದು ಬೆಳೆಗುಂ ವೃಷ್ಟಿಯಿ ।
ನಾವಿಷಯಂ ದೇವಮಾತೃಕಂ ಸತತಂ ಮ ॥
ತ್ತಾವುದು ನದೀಪ್ರವಾಹದೆ ।
[ತೀವಿ] ವನದೀಮಾತೃಕಂ ತದುರ್ವೀಭಾಗಂ ॥ ೩ ॥

ಎರೆಯುಳ್ಳುದೊಂದು ಭೂಮ್ಯಂ ।
ತರಮದು [ತಾಂ] ಕೃಷ್ಣ ಭೂಮಿ ಯಕ್ಕುಂ ಬೆಳ್ಮೆ ॥
ಣ್ಬೆರಸಿದ ಮಹೀಪ್ರದೇಶಂ ।
ನಿರಂತರಂ ಪಾಂಡುಭೂಮಿ ಯೆಂಬುದದನಿಕುಂ ॥ ೪ ॥

ಜಳೆಬಹುಳಮನೂಪಂ ಜಾಂ ।
ಗಳ ಮಜಳಂ ಶಾದಹರಿತ ಮಪ್ಪುದು ದಲ್ ಶಾ ॥
ದ್ವಳ ಮದು ಖಿಳ ಮಪ್ರಹತಂ ।
ನೆಲಂ ಸ್ಥಲಂ ಸ್ಥಲಿ ಸಶರ್ಕರಂ ಶರ್ಕರಿಲಂ ॥ ೫ ॥

ಕಂ॥ ಶಾಲೇಯಂವ್ರೈಹೇಯಂ ।
ತೈಲೀನಂ ಕೋದ್ರವೀಣ ಮೌಮೀನಂ ತ ॥
ಚಾಢ್ಳಿಪ್ರಭೃತಿ ಮಹಾಧಾ ।
ನ್ಯಾಳಿಸಮುತ್ಪತ್ತಿಗಾದ ಮುಚಿತಂ ಕ್ಷೇತ್ರಂ ॥ ೬ ॥

ಪಶುಗಳ್ಗೆ ಹಿತಮೆನಿಪ್ಪುದು ।
ಪಶೀಯಮದು ನಡ್ವಳಂ ನಳಾನ್ವಿತಮಕ್ಕುಂ ॥
ವೃಶಶಾಕಪ್ರಭವಂ ಶಾ ।
ಕಶಾಕಟಂ ಶಾಕಶಾಕಿನಂ ತಾನೆನಿಕುಂ ॥ ೭ ॥

ಇಂತು

—ಭೂವರ್ಗಂ—

# ಶ್ರೀ ವೀತರಾಗಾಯನಮಃ.

೧ ಅವಿಭಿನ್ನಾರ್ಥಕಾಂಡಂ. ೬ ಕಾಲಾಯಸಾದಿ ಧಾತುವರ್ಗಂ.

ಕಂ॥ ಗಿರಿ ಗೋತ್ರಂ ಶಿಖರಿ ಧರಂ ।
ಸ್ಥಿರಂ ನಗಂ ಪರ್ವತಂ ಶಿಲೋಚ್ಚಯ ಮುರ್ವೀ ॥
ಧರ ಮದ್ರಿ ಶೈಲ ಮಚಲಂ ।
ದರಿಮಂತಂ ಶೃಂಗಿ ಸಾನುಮಂತ ಮಹಾರ್ಯಂ ॥ ೧ ॥

ಅನಗಕಟಕಂ ಪ್ರಸ್ಥಂ ।
ಸಾನು ತಟಂ ಭೃಗು ನಿತಂಬ ಮಂತದು ತಪ್ಪಲ್ ॥
ತಾನೆನಿಸುಗು ಮುಪಕಂಠದ ।
ಕಾನನ[ರಾಜಿಯು]ಮುಪತ್ಯಕಾಹ್ವಯಮಕ್ಕುಂ ॥ ೨ ॥

ದರಿ ಕಂದರಂ ಬಿಲಂ ಗ ।
ಹ್ವರಂ ಗುಹಾಕುಹರ ಮದ್ರಿಕುಂಜಂ ಕೊಳ್ಳಂ ॥
ಗಿರಿಪರ್ಯಂತಂ ಪಾದಂ ।
ಪರಿಸರ [ದ ತೊಱೆಯದು ನಿರ್ಝರಂ ಪ್ರ] ಸ್ರವಣಂ ॥ ೩ ॥

ಶಿಲೆ ಪಾಷಾಣಂ ಗ್ರಾವೋ ।
ಪಲಾಶ್ಮ ದೃಷದಾಖ್ಯ ಮಕ್ಕು ಮಗಶಿಖರಾಗ್ರ ॥
ಸ್ಖಲಿತನಿತಾಂತಸ್ಥೂಳೋ ।
ಪಲಂಗಳವೆ ಗಂಡಶೈಲ ಮೆನೆ ಪೆಸರ್ವಡೆಗುಂ ॥ ೪ ॥

ಪಾರಸವಂ ಲೋಹಂ ಗಿರಿ ।
ಸಾರ ಮಯಸ್ತೀಕ್ಷ್ಣವಾಯಸಾಖ್ಯಂ ಕಬ್ಬೊನ್ ॥
ಗೈರಿಕ ಪೊನಿಕುಂ ಜಾಜದು ।
ಸಾರಾಶ್ಮಭವಂ ಮನಶ್ಶಿಲಾದಿಗಳೆನಿಕುಂ ॥ ೫ ॥

ಗಿರಿಜೋತ್ತ್ರವು ಕಾಂಚನ ಜಾ ।
ತರೂಪ ತಪನೀಯ ಭರ್ಮ ಹಾಟಕ ಚಾಮೀ ॥
ಕರ ಶಾತಕುಂಭ ಕಾರ್ತ ।
ಸ್ವರ ಕನಕ ಸುವರ್ಣ ರುಕ್ಮನಾಮಂ ಹೇಮಂ ॥ ೬ ॥

ಕಂ॥ ಗೈರಿಕ ನಿಷ್ಕ ಹಿರಣ್ಯ ಮು ।
ಹಾರಜತ ಸ್ವರ್ಣ ಕರ್ಬುರ ರಾಷ್ಟಾಪದ ಮಿ॥
ನ್ನೋರಂತಱಿ ಜಾಬೂನದ ।
ಮಾರಯೆ ಗಾಂಗೇಯಶಬ್ದಿತಂ ಕಲ್ಯಾಣಂ ॥ ೭ ॥

ಶ್ವೇತಂ ರಜತಂ ತಾಂ ಕಳೆ ।
ಧೌತಾಖ್ಯಂ ತಾರ ಮೆಂಬುದಕ್ಕುಂ ರೂಪ್ಯಂ ॥
ರೀತಿಕೆ ಯದಾರಕೂಟಂ ।
ಖಾತಂ ತಾಂ ವೃತ್ತಿಲೋಹಮೆನೆ ವೃತ್ತಕಮುಂ ॥ ೮ ॥

ತ್ರಪು ವಂಗಂ ಸೀಸಂ ಸೀ ।
ಸಪತ್ರಕಂ ನಾಗ ಮಱಿಗೆ ಸೌರಾಷ್ಟ್ರಕ ಮ ॥
ಭ್ಯುಪಗತಮಕ್ಕುಂ ಕಾಂಸ್ಯ ।
ಕ್ಕೆ ಪೆಸರ್ ತಾಮ್ರಕ ಮುದುಂಬರಂ ಕಿಸು ಶುಲ್ಬಂ ॥ ೯ ॥

ಮರಕತ ಮದಶ್ಮಗರ್ಭಂ ।
ಗರುಡೋದ್ಗಾರಂ ಹರಿನ್ಮಣಿಸಮಾಖ್ಯಂ ಮ ॥
ತ್ತರುಣಾಶ್ಮಂ ಕಿಸುಗಲ್ ಪ ।
ದ್ಮರಾಗಮಣಿ ವಾಳವಾಯಜಂ ವೈಡೂರ್ಯಂ ॥ ೧೦ ॥

ರೂಪ್ಯಂ ಸುವರ್ಣ ಮೆರಡು ಮ ।
ಕುಪ್ಯಂ ಮತ್ತದೆ ಹಿರಣ್ಯ ಮೆಂಬುದುವಕ್ಕುಂ ॥
ಕುಪ್ಯ ಮವಲ್ಲದು [ದಕ್ಕುಂ] ।
ರೂಪ್ಯಂ ತಾನೆನಿಕು ಮಾಹತಂ ತದ್ದ್ವಿತಯಂ ॥ ೧೧ ॥

ದ್ರವಿಣಂ ದ್ರವ್ಯಂ ವಸ್ವ ।
ರ್ಥ ವಿತ್ತ ರೈ ರಿಕ್ಥ ಸಾರ ಧನ ಮೇಕಾರ್ಥಂ ॥
ನವನಿಧಿಗಳ್ ಶೇವಧಿಗಳ್ ।
ಸುವಿಹಿತ ನಿಕ್ಷೇಪಮಂತದುಪನಿಧಿ ಯೆನಿಕುಂ ॥ ೧೨ ॥

ಇಂತು

—ಕಾಲಾಯಸಾದಿ ಧಾತುವರ್ಗಂ—



# ಶ್ರೀ ವೀತರಾಗಾಯನಮಃ.



ಕಂ॥ ತರು ಶಾಖಿ ಪಾದಪಂ ವಿ।
ಷ್ಟರ ಮದ್ರಿ ಕುಜಂ ದ್ರುಮಂ ದ್ರು ಶಾಳ ಮಗಂ ಭೂ॥
ಮಿರುಹಂ ವಿಟಪಿ ವನಸ್ಪತಿ।
ಮರಂ ನಗಂ ಕುಟ ಮನೋಕಹಂ ಶಿಖಿ ವೃಕ್ಷಂ ॥ ೧ ॥

ಫಳ ಮೊಳ್ಳುದು ಫಳಿನಂ ನಿ।
ಷ್ಫಳಕುಜ ಮವಕೇಶಿ ಪುಷ್ಪಚಯಮಿಲ್ಲದೆಯುಂ॥
ಫಳಮಪ್ಪುದದು ವನಸ್ಪತಿ।
ಫಳಪುಷ್ಪಕುಳಪ್ರಸೂತಿ ವಾನಸ್ಪತ್ಯಂ ॥ ೨ ॥

ತಮಗವಸಾನಂ ಫಳಪಾ।
ಕಮಪ್ಪವೋಷಧಿಗಳೆನಿಸುಗುಂ ಹ್ರಸ್ವಶಿಖಾ॥
ನಿವಹಂ ಕ್ಷುಪನಾಮಂ ವ।
ಲ್ಲಿ ವೀರುದಾಖ್ಯಂಗಳೆಲ್ಲಮವೆ ಗುಲ್ಮಂಗಳ್ ॥ ೩ ॥

ಅಂಕುರ ಮಂಕೂರಂ ಪ್ರಥ।
ಮಾಂಕುರ ಮಕ್ಕುಂ ಪ್ರರೋಹನಾಮಂ ಕಳಿಕಾ॥
ಸಂಕುಳ ಮಂತವೆ ಜಾಳಕ।
ಮುಂ ಕೊನರಲುಂ ಮುಕುಳ ಕೋರಕಂಗಳವೆನಿಕುಂ ॥ ೪ ॥

ಛದನಂ ಪತ್ರಂ ಪರ್ಣಂ।
ಛದಂ ಪಳಾಶಂ ದಳಂ ಸಮಮಮೇಕಾರ್ಥಂ॥
ಪುದಿದೊಂದಿದ ಮೂಲಂ ತತ್ತ।
ನದು ಪಾದಂ ಶಿಫೆ ಜಟಾಭಿಧಾನಮುದಕ್ಕುಂ ॥ ೫ ॥

ಕಂ॥ ಆರೋಹಮುಚ್ಛ್ರಯಂ ವಿ।
ಸ್ತಾರಂ ವಿಟಪಂ ಪ್ರಕಾಂಡಮುಕ್ಕುಂ ಸ್ಕಂಧಂ ॥
ಸಾರಂ ಮಜ್ಜಂ ವಲ್ಕಂ।
ನಾರಂತದು ಕೋಟರಾಹ್ವಯಂ ತಾಂ ಪೋಟಿಲ್ ॥ ೬ ॥

ಶಿಖರಿಣಿ ॥ ಅವಾಗ್ಭಾಗಂ ಬುಧ್ನಂ ಕ್ಷಿತಿರುಹಶಿರಂ ತಾನೆ ಶಿಖರಂ।
ಕವಲ್ಗಳ್ ಸ್ಕಂಧಾಗ್ರಪ್ರತತಿ ಬಹುಶಾಖಾಪರಿಕರಂ ॥
ಧ್ರುವಂ ಶಂಕ್ವಾಖ್ಯಂ ತಾಂ ಕೊಱಡೆದು ಮಡಳ್ ತಾಮುದೆನಿಕುಂ।
[ನವಂ] ತಾಂ ಕಾಷ್ಠೇಧ್ಮೇಂಧನಮೆನೆ ಸಮಿದ್ವಾಚಿ ಯೆನಿಕುಂ ॥ ೭ ॥

ಕಂ॥ ವ್ರತತಿ ಲತಾ ವೀರುತ್ತಾ।
ಪ್ರತಾನಿನೀನಾಮ ಮಱಿಗೆ ವಲ್ಲರಿ ಭೃಶಸಂ ॥
ಭೃತನವಮಂಜರಿ ಗೊಂಚಲ್।
ಪ್ರತಾನ ಮುಳಿಪಂ ತೊಡಂಬೆ ಯಂತದು ವೃಂತಂ ॥ ೮ ॥

ಪೊಸಮಿಡಿ ಶಲಾಟು ತಾನದು।
ಪಸುರಾಱಿದ ಫಳನಿಕಾಯಮುಕ್ಕುಂ ವಾನಂ ॥
ಪೊಸದಳಿರೆನೆ ಪಲ್ಲವ ಮೆನೆ।
ಕಿಸಲಯ ಮೆನೆ ತಾಂ ಪ್ರವಾಳ ಮೆನೆ ಸದೃಶಾರ್ಥಂ ॥ ೯ ॥

ಮುಕುಳಂ ಕುಟ್ಮಲ ಮದು ತ।
ದ್ವಿಕಾಸ ಮುಜ್ಜೃಂಭಿತಂ ಸ್ಮಿತಂ ವ್ಯಾಕೋಚಂ ॥
ವಿಕಚಂ ದಳಿತಂ ಹಸಿತಂ।
ವಿಕಸಿತ ಮುನ್ಮೀಲಿತಂ ವಿನಿದ್ರ ಮೆನಿಕ್ಕುಂ ॥ ೧೦ ॥

ಕುಸುಮಂ ಪ್ರಸೂನ ಸುಮನಃ।
ಪ್ರಸವಾಖ್ಯಂ ಪುಷ್ಪಮೆಸೆವ ಗುಚ್ಛಂ ಸ್ತಬಕಂ ॥
ಕುಸುಮದ ರಜಂ ಪರಾಗಂ।
ಕುಸುಮಾಸವರಸ ಮದಲ್ತೆ ಮಧು ಮಕರಂದಂ ॥ ೧೧ ॥

ಕಂ॥ ಗೃಹವಾಟಿ ನಿಷ್ಕುಟಂ ರಮ ।
ಣಹೇತುವದು ಪುಷ್ಪವಾಟಿ ತಾಂ ಪೂದೋಟಂ ॥
ಬಹಳಮಧುಪಾನಕಂ ಹೃದ ।
ಯಹಾರಿ ವಿರುತಾಳಿಮಾಳಿಕಾ ಕಮನೀಯಂ ॥ ೧೨ ॥

ಪ್ರಮದವನಂ ಶುದ್ಧಾಂತ ।
ಪ್ರಮದಾಜನದೊಡನೆ ಕೂಡಿ ವಿಹರಿಪ್ಪ ವನಂ ॥
ಸಮುದಿತ ಸಮಸ್ತಲೋಕಂ ।
ರಮಿಯಿಸುವ ವನಾಂತ ಮಂತದುದ್ಯಾನವನಂ ॥ ೧೩ ॥

ಪ್ರಹರ್ಷಿಣೀ॥ ಊರಿಂದಂ ಪೊಱಗಣ ಮೆಯ್ಯೊಳೊಲ್ದು ಧರ್ಮ ।
ಕ್ಕಾರಾಮಂ ಪುರಜನವಿಟ್ಟ ಭೂಜಷಂಡಂ ॥
ಆರಾಮಂ ಪೆಸರೊಳೆದಕ್ಕುಮಾಮ್ರನಿಂಬ ।
ಕ್ಷೀರಾದಿದ್ರುಮಬಹುಳಂ ಮನೋಭಿರಾಮಂ ॥ ೧೪ ॥

ಕಂ॥ ಕಾಂತಾರ ವಿಪಿನ ಗಹನ ।
ಪ್ರಾಂತರಕಾನನ ವನಾಟವೀ ಕಕ್ಷ ಸಮಾ ॥
ಖ್ಯಂ ತಾ ನರಣ್ಯಮಿವು ಮ ।
ತ್ತಂತದರಣ್ಯಾನಿ ಯೆನಿಕುಮೊವವಿದ ಪೆರ್ಚಿಂ ॥ ೧೫ ॥

ಇಂತು

—ವನವರ್ಗಂ—



# ಶ್ರೀ ವೀತರಾಗಾಯ ನಮಃ.



ಅಕ್ಕರಂ॥ ಅಸುಗೆ ಕಂಕೆಲ್ಲಿ ತಾನಶೋಕಾಹ್ವಯಂ ಪಾದರಿ ಪಾಟಳಾಖ್ಯಂ ।
ಕೊಸಗು ವೃಕ್ಷೋತ್ಪಳಂ ಕರ್ಣಿಕಾರಂ ಸಂಪಗೆ ಚಾಂಪೇಯಂ ಚಂಪಕಾಹ್ವಯಮೆನಿಕುಂ ॥
ಪೆಸರೊಳ್ ಸೀವನ್ನಿ ಕಾಶ್ಮರಿಯಂ ಕಟ್ಫಳಂ ಮಾಲಂ ನ್ಯಗ್ರೋಧಂ ವಟಮೆನಿಕ್ಕು ।
ವಸಮಪರ್ಣಂ ಸಪ್ತಚ್ಛದದ್ರುಮ ವೇಱಿಲೆ ವಾಱಿ ಯೆಂದಱಿದು ಕೊಳ್ಗೆ ॥ ೧ ॥

ಕಂ॥ ಎಲವಂ ಸ್ಥಿರಾಯು ತಾಂ ಶಾ ।
ಲ್ಮಲಿ ಯೆನಿಕುಂ ಬಸರಿ ಪರ್ಪಟೀ ಪ್ಲಕ್ಷಾಹ್ವಂ ॥
ತಿಲಕಂ ಕ್ಷುರಕಾಖ್ಯಂ ಘೇ ।
ನಿಲ ಮಕ್ಕುಮರಿಷ್ಟಶಾಖಿ ದಾಡಿಮಿ ಕರಕಂ ॥ ೨ ॥

ಚೂತಂ ಮಾಕಂದಮಕೀ ।
ಜಾತಂ ಸಹಕಾರ ಮಾಮ್ರ ಮೆನಿಕುಂ ಮತ್ತಾ ॥
ಮ್ರಾತಕ ಪೀತನಕಂ ರಾ ।
ಜಾತನಮಕ್ಕುಂ ಪ್ರಿಯಾಳಮೋ ಚಳದಳಕಂ ॥ ೩ ॥

ಚಲದಳ ಮಶ್ವತ್ಥಂ ಪಿ ।
ಪ್ಪಲ ಮರಳಿ ಪಲಾಶಕಾಖ್ಯಂ ಮುತ್ತಂ ॥
ತಳೆಮುಂ ತಾಳೆಮು ಮೆನೆ ಪನೆ ।
ಫಳಿನಿ ಶ್ಯಾಮಂ ಪ್ರಿಯಂಗು ನಾಮಂ ನೆಗೞ್ಗುಂ ॥ ೪ ॥

ವಕುಳಂ ಕೇಸರತರು ಬೀ ।
ಜಕಮಕ್ಕುಂ ಕೋವಿದಾರಕುದ್ದಾಳಾಹ್ವಂ ॥
ಕಕುಭ ಮದರ್ಜುನಭೂಜಂ ।
ಲಿಕುಚಂ [ಲಕುಚಂ] ಕಪಿತ್ಥ ಮಱಗೆ ದಧಿತ್ಥಂ ॥ ೫ ॥

ಕಂ॥ ಐರಾವತಾಭಿಧಾನಂ ।
ನಾರಂಗಂ ಬೀಜಪೂರಕಂ ರುಚಕಂ ಜಂ ॥
ಬೀರಂ ತಾಂ ಕರಣಂ ಕದ ।
ಳೀರಂಭಾಭಿಖ್ಯಮಂತದಕ್ಕುಂ ಮೋಚಂ ॥ ೬ ॥

ಪೂಗಂ ಗುವಾಕ ಮೆನಿಕುಂ ।
ನಾಗಲತಾನಾಮ ಮಡಿಕೆಗೆ ತಾಂಬೂಳಿಕೆ ವು ॥
ನ್ನಾಗಂ ಸುರವಲ್ಲಭ ಮದು ।
ನಾಗರ ಗಜಕೇಸರಂ ಲವಂಗಂ ವಲ್ಕಂ ॥ ೭ ॥

ಶೇಲು ಶ್ಲೇಷ್ಮಾತಕತರು ।
ಪೀಲು ವೆನಲ್ಗುಡೆಫಲಂ ಗಿರಿಪ್ರಭವ ಮದ ॥
ಕ್ಷೋಳಂ ರೋಧ್ರಂ ತಿಲ್ವಂ ।
ಕಾಳಸ್ಕಂಧಂ ತವಮಾಳ ಮೆನೆ ತಾಪಿಚ್ಛಂ ॥ ೮ ॥

ಕ್ರಿಮಿಘಳ ಮುದುಂಬರಂ ನ ।
ಕ್ತಮಾಳ ಮಕ್ಕುಂ ಕರಂಜಭೂಜಂ ಭಲ್ಲಾ ॥
ತ ಮರುಷ್ಕರಂ ಕದಂಬ ।
ದ್ರುಮ ಮದು ನೀಪಂ ಮಧೂಕತರು ಗುಡಪುಷ್ಪಂ ॥ ೯ ॥

ನಿಂಬ ಮರಿಷ್ಟಂ ಪಿಚುಮಂ ।
ದಂ ಬೇವು ಪರೂಪಕಾಹ್ವಯಂ ಶಾಖಾಳಂ ॥
ಜಂಬೂ ನಾಮಂ ನೇಱಿಲ್ ।
ತುಂಬುರು ತಿಂದುಕ ಮೆನಿಷ್ಪುದಕ್ಕುಂ ಪೆಸರಿಂ ॥ ೧೦ ॥

ತಾಳಂ ಮದನಂ ಸರ್ಜಂ ।
ಶಾಲಂ ಸಲ್ಲಕಿ ಗಜಪ್ರಿಯಾಹ್ವಂ ಬಿಲ್ವಂ ॥
ಮಾಲೂರಂ ಶ್ರೀಫಲಮೆನೆ ।
ಕೋಲಂ ಕರ್ಕಂಧು ಬದರಿ ಕೋಲೀ ನಾಮಂ ॥ ೧೧ ॥

ಕಂ॥ ಚೇತಕಿ ಶಿವೆ ಹೈಮವತಿ ಹ ।
ರೀತಕಿ [ಯಭ]ಯಾಖ್ಯೆಪಥ್ಯೆ ತಿಷ್ಯಫಲಂ ಧಾ ॥
ತ್ರೀತರು [ವಾಮಲಕಾಖ್ಯೆ] ವಿ ।
ಭೀತಕ ಮಕ್ಕುಂ ಕಲಿದ್ರುಮಂ ಭೂತಗೃಹಂ ॥ ೧೨ ॥

ಕತಕಂ ಪ್ರಸಾದನಂ... ।
ವಿತರದಮ್ಮೆಲ್ಲತರು ಶಿಗ್ರು ಶೋಭಾಂಜನಕಂ ॥
ಕೃತಮಾಳಂ ಶಮ್ಯಾಕಂ ।
ಚತುರಂಗುಳ ಮೆಂಬುದಕ್ಕು ಮಾರಗ್ವಧದೊಳ್ ॥ ೧೩ ॥

ಶುಕತರು ಭಾಂಡಿ ಶಿರೀಷಂ ।
ವಿಕಂಕತಂ ಸ್ವಾದುಕಂಟಕಂ ಚಿರಿಬಿಲ್ವಂ ॥
ಕುಕರಂಜಂ ಪನಸಂ ಕಂ ।
ಟಕಫಳ ಮೇರಂಡ ಮೂರುಬೂಕ ಮದಕ್ಕುಂ ॥ ೧೪ ॥

ಖದಿರಂ ಸಿತ ಮಱ ಯಂತದು ।
ಕದರಂ ಗಾಯತ್ರಿ ದಂತಧಾವನ ಮದು ವಿ ॥
ಟ್ಖದಿರ ಮರಿಮೇಧನಾಮಕ ।
ಮದು ತಿನಿಶಂ ನೇಮಿ ತಾಂ ರಥದ್ರುಮ ಮಕ್ಕುಂ ॥ ೧೫ ॥

ಅರುಣಮದು ಶೃಂಗಿ ತೇಗಿನ ।
ಮರನದೆ ಸಾಕಂ ಮೃದುತ್ವಚಂ ಭೂರ್ಜಂ ಕುಂ ॥
ದುರು ಕುಂದುರುಷ್ಕ ಮೆನೆ ಪಿರಿ ।
ವರಂದಮಂ ಹುಣಿಸೆ ತಿಂತ್ರಿಣೀಚಿಂಚಾಹ್ವಂ ॥ ೧೬ ॥

ಇಂಗುದಿ ತಾಪಸಭೂಜ ಮಂ ।
ದಿಂಗಳು ಮಿರ್ಬೀಡು ಶಿಂಶುಪಾಭಿಖ್ಯಂ ಖ ॥
ಟ್ವಾಂಗಂ ತಾನೆರಳೆಕ್ಕುಂ ।
ಮಾಂಗಲ್ಯಾನಾಮ ಮದು ಶಮೀದ್ರುಮಮಕ್ಕುಂ ॥ ೧೭ ॥

ಕಂ॥ ವಿದುಳಂ ಶೀತಂ ವೇತಸ ।
ಮದು ವಂಶಂ ವೇಣು ಮಸ್ಕರಂ ತ್ವಕ್ಸಾರಂ ॥
ಬಿದಿರಿವೞಿತೊಳಾದ ಗಾಳಿಯು ।
ಪುದುವಿಂ ಧ್ವನಿಯಿಸುವ ವೇಣು ಕೀಚಕ ಮಕ್ಕುಂ ॥ ೧೮ ॥

ತಾಳಂ ಖರ್ಜೂರಂ ಹಿಂ ।
ತಾಳಂ ಕೇತಕಿ ಸನಾರಿಕೇಳಂ ಕ್ರಮುಕಂ ॥
ತಾಳದ್ರುಮಮೆಂದಿವು ಭೂ ।
ಜಾಳಿಗಳೊಳ್ ತೃಣಮಹೀರುಹಂಗಳೆನಿಕ್ಕುಂ ॥ ೧೯ ॥

ಸರಳಂ ಪೀತದ್ರು ಮಹಾ ।
ತರುವಕ್ಕುಂ ಸ್ನುಹಿ ಕರೀರನಾಮಂ ಕ್ರಕರಂ ॥
ಕರವೀರ ಮಶ್ವಮಾರಂ ।
ಗಿರಿಮಲ್ಲಿಗೆ ವತ್ಸಕಾಭಿಧಾನಂ ಕುಟಜಂ ॥ ೨೦ ॥

ಪ್ರಪುನಾಟಮದೇಡಗಜಂ ।
ಕಪಿತ್ಥಪರ್ಣಾಖ್ಯೆ ತಗಸಿ ಮರ್ಕಟಿ ಯೆನಿಕುಂ ॥
ಕಪಿಕಚ್ಛು ದುರಾಲಭೆ ತುಱಿ ।
ಚೆ ಪೀಱಿಜಾಲಿನಿ ಯಲಾಬು ತುಂಬೀ ನಾಮಂ ॥ ೨೧ ॥

ಅನಲಂ ಚಿತ್ರಕ ಮದು ಗೋ ।
ಸ್ತನಿ ಮೃದ್ವೀಕಾಭಿಧಾನೆ ತಾಂ ದ್ರಾಕ್ಷೆ ತಪ ॥
ಸ್ವಿನಿ ಜಟಿಳೆ ಮಾಂಸಿ ವತ್ಸಾ ।
ದನಿ ಛಿನ್ನರುಹಂ ಗುಡೂಚಿ ತಂತ್ರಿ ಯೆನಿಕ್ಕುಂ ॥ ೨೨ ॥

ಮಂಜಿಷ್ಠಾವಿಕಸಾಖ್ಯಂ ।
ತಾಂ ಜೆಂಗಿ ಕಿರಾತತಿಕ್ತಕಂ ಭೂನಿಂಬಂ ॥
ಗುಂಜೆಯದು ಕೃಷ್ಣಲಾಭಿ ।
ಖ್ಯಂ ಜಳದಂ ಮುಸ್ತೆಮುಸ್ತಕಂ ಕುರುವಿಂದಂ ॥ ೨೩ ॥

ಕಂ॥ ಏಳಾವಾಳುಕ ಸಂಜ್ಞಿಕ ।
ವೈಳೇಯಂ ಭದ್ರಮುಸ್ತೆ ಗುಂದ್ರಾವಚನಂ ॥
ಬಾಳ ಮುಶೀರಂ ವಾರಿ ವ್ಯೈ ।
ಣಾಳಮುದೀಚ್ಯಾಭಿಧಾನಕಂ ಹ್ರೀವೇರಂ ॥ ೨೪ ॥

ಹರಿಣಿ॥ ಸುರಸಿತುಳ ನಾ (ಯ......ತ)ರ್ಜಿಕಾಖ್ಯೆ ಕುಟೇರಕಂ ।
ಸುರಭಿತರಸಂ ಗಂಧಂ ತಾಂ ಪೃಶ್ನಿಪರ್ಣಿ ಫಣಿರ್ಜಕಂ ॥
ಮರು ಮರುವಕಂ ಪೀತಾಭಿಖ್ಯಂ ಹರಿದ್ರೆ ನಿ [ಶಾಭಿಧಂ] ।
ಮರದರಸಿನಂ ದಾರ್ವೀ ಸಾಹ್ವಂ ಪಚಂಪಚೆ ದಾರುಕಂ ॥ ೨೫ ॥

ಕಂ॥ ಲಶುನಂ ಗೃಂಜನಸಂಜ್ಞಂ ।
ರಸೋನಕಂ ಸೂರಣಾಹ್ವಯಂ ಕಂದಂ ವಾ ॥
ಯಸಿ ಕಾಕಮಾಚಿ ಪೆಸರಿಂ ।
ಮಿಸಿ ಶತಪುಷ್ಪಿಕೆ ಪುನರ್ನವಂ ವೃಶ್ಚಿವಂ ? ॥ ೨೬ ॥

ಅಂಗಾರವಲ್ಲಿ ಕೊಡಸಿಗೆ ।
ಲಾಂಗಲಿ ನಾಂಗುಳಿಕ ಮಗ್ನಿಮಂಥನ ನಱುವಲ್ ॥
ಜಾಂಗೇರಿ ಚುಕ್ರಿಕಾಹ್ವಂ ।
ಭೃಂಗಂ ಮಾರ್ಕವ ಮಲಂಬುಸಂ ಬೋಳತರಂ ॥ ೨೭ ॥

ಕರವಂದಂ ಕರವಂದಿಗೆ ।
ಬಱುವಣೆ ನಿರ್ದಿಗ್ಧಿಕಾಖ್ಯೆ ಶತಮೂಳಿ ಶತಾ ॥
ಪರಿ ತಂಡುಳೀಯಕಂ ಜಳೆ ।
ಘರನಾಮಂ ಸೋಮವಲ್ಲಿ ವಾಕುಚಿಯುಕ್ಕುಂ ॥ ೨೮ ॥

ತೊಂಡೆ ದಲೋಷ್ಠಿ ಬಿಂಬಂ ।
ತುಂಡಿಸಮಾಭಿಖ್ಯ ಮಱುಗೆ ಸಹದೇವಾಖ್ಯಂ ॥
ದಂಡೋತ್ಪಳಮುಕ್ಕುಂ ನಿ ।
ಗುರ್ಗಂಡಿಯು ದಿಂದ್ರಾಣಿ ಸಿಂಧುವಾರ ಮೆನಿಕ್ಕುಂ ॥ ೨೯ ॥

ಕಂ॥ ಶರಪುಂಖಿ ಗೋಗಿರ್ ತಾನದು ।
ಗಿರಿಕರ್ಣಿಕೆಯೆಂಬುದಕ್ಕು ಮಪರಾಜಿತೆ ಗೋ ॥
ಕ್ಷುರಕಂ ಶ್ವದಂಷ್ಟ್ರಮದು ಬಾ ।
ದರಂ ಪಿಚವ್ಯಾಖ್ಯಮಱಿಗೆ ಪಿಚು ಕಾರ್ಪಾಸಂ ॥ ೩೦ ॥

ಮ। ಸ್ರ॥ ಸುವಹಾ ಕಂ ರಾಸ್ನೆ ರಾಜಕ್ಷವಯರಪುಲಿಯುಂ ವಾರ್ರುಕಂ ಕರ್ಕಟೀನಾ ।
ಮವಿಶೇಷಂ ಚಿರ್ಭ[ಟಂ]ವಾಳುಕಿಯೆನೆ ಪಡೆಗುಂ ವಾಸ್ತುಕಂ ವಾಸ್ತುಮತ್ಸ್ಯಾ॥
ಕ್ಷಿ ಮಯುಸ್ಥಾಭಿಖ್ಯೆ ಗುಚ್ಛಂ ಬೃಹತಿ ಬದನೆ ವಾರ್ತಾಕಿ ಕರ್ಕಾರು ಕೂಷ್ಮಾಂ।
ಡ ಪೆನಿಕ್ಕುಂ ಕಾರವೇಲ್ಲಂ ಸುಷವಿ ಪೆಸಗೊಳಲ್ಕಾದ್ರ್ರಕಂ ಶೃಂಗಬೇರಂ ॥ ೩೧ ॥

ಕಂ॥ ಮರಿಚಾಹ್ವ ಮೂಷಣಂ ಮಗ ।
ಧರುಹಂ ಕೃಷ್ಣಾ ಕಣಾಹ್ವಯಂ ಪಿಪ್ಪಲಿ ನಾ ॥
ಗರಕಂ ಮಹೌಷಧಂ ಶುಂ ।
ಠಿ ರಾಮಠಂ ಹಿಂಗು ಜರಣಕಂ ಬಾಹ್ಲೀಕಂ ॥ ೩೨ ॥

ಅಜಮೋದ ಮದೋಮ ಮಜಾ ।
ಜಿ ಜೀರಕಂ ಧಾನ್ಯಮಱಿಗೆ ಕುಸ್ತುಂಬುರು ತಾಂ ॥
ಖಜಿ ಷಡ್ಗ್ರಂಥಿಕೆ ಕುಷ್ಠಮು ।
[ದ] ಜಾಹ್ವಯಂ ಮಣಿಮಂಥರಂ ಸಿಂಧೂತ್ಥಂ ॥ ೩೩ ॥

ಅಕ್ಕರ॥ ಜಾತಿ ಮಾಳತಿ ವಾಸಂತಿ ಮಾಧವಿ ಮಲ್ಲಿಗೆ ವಿಚಕಿಳಂ ಮೊಲ್ಲೆ ಕುಂದಂ ।
ಕೇತಕ್ಯಾಹ್ವಯಂ ಕೇದಗೆ ಯೂಥಿಕೆ ಮಾಗಧಿ ಬಂಧೂಕಂ ಬಂಧುಜೀವಂ ॥
ಮಾತೇಂ ತಾಂ ಕುರಂಟಕ ಮವಮ್ಲಾನಮ ರಕ್ತಂ ಕುರವಕಂ ನೀಲಂ ಬಾಣಂ।
ಪೀತಂ ಸಹಚರಿ ಯೆನಿಸುಗುಂ ಮತ್ತದು ವಿಳೆಕ್ಕೈಳಭಿಕೆ ಪಿಕ್ಕೆಯುಕ್ಕುಂ ॥ ೩೪ ॥

ಕಂ॥ ನವಮಾಳಿಕೆ ಸಂದಿರುಮಂ ।
ತಿ ವರ್ಣಪುಷ್ಪಾಭಿಧಾನ ಮಮಿಲಾತಂ ದಾ ॥
ಸಮೇಣಂ ಜಪಾಹ್ವಯಂ ನಂ ।
ದಿವರ್ತ್ತ ಮದು ತಗರಸಂಜ್ಞಕಂ ತಾನಕ್ಕುಂ ॥ ೩೫ ॥

ಕಂ॥ ಉತ್ತರಣೆ ಯಪಾಮಾರ್ಗಂ ।
ಬೆತ್ತಂ ವೆತ್ತಂ ಕುಟನ್ನಟಂ ಪಳವಕತಾಂ ॥
ದುತ್ತೂರಂ ಕಾಂಚನ ಮು ।
ನ್ಮತ್ತಂ ಕಿಂಪಾಕಮದು ಮಹಾಕಾಳಾಖ್ಯಂ ॥ ೩೬ ॥

ಉಪೇಂದ್ರ॥ ವಾಸಾಟರೂಷಾಹ್ವಯ ಮಾಡಸೋಗೆ ।
ಕೋಶಾತಕಾಖ್ಯಂ ಕುಲಕಂ ಪಟೋಳಂ ॥
ಕುಶಂ ಕುಥಂ ಬರ್ಹಿ ಪವಿತ್ರ ದರ್ಭಂ ।
ಕಾಶಂ ಕಿಶಂ ಖಾಸಮಭಿಖ್ಯೆಯಕ್ಕುಂ ॥ ೩೭ ॥

ಕಂ॥ ಶರಮದು ಮುಂಜಂ ದೂರ್ವಾ ।
ಹರಿತಾಳೀ ನಾಮಕಂ ಕಱುಂಕೆ ಯೆನಿಕ್ಕುಂ ॥
ತರುಣತೃಣಂ ಶಷ್ಪಂ ಯವ ।
ಸರಾಜಿ ಘಾಸಂ ಸಮಸ್ತತೃಣ ಮರ್ಜುನಕಂ ॥ ೩೮ ॥

ಇಂತು

—ವೃಕ್ಷಾದಿವರ್ಗಂ—



ನಮಸ್ಸಿದ್ಧೇಭ್ಯಃ

# ಶ್ರೀ ವೀತರಾಗಾಯನಮಃ.

೧ ಅವಿಭಿನ್ನಾರ್ಥಕಾಂಡಂ. ೯ ಮೃಗಪಕ್ಷಿವರ್ಗಂ.

ಕಂ॥ ಶರಭ ಮದಷ್ಟಾಪದ ಮಿಭ ।
ವಿರೋಧಿ ಕಂಠೀರವಂ ಮೃಗಾಧೀಶಂ ಕೇ ॥
ಸರಿ ಹರಿ ಸಿಂಹಂ ವ್ಯಾಘ್ರಂ ।
ತರಕ್ಷು ಮೃಗರಿಪು ಚಮೂರ ವೆನೆ ಶಾರ್ದೂಲಂ ॥ ೧ ॥

ಖರದಂಷ್ಟ್ರ ಕೋಳ ಸೂಕರ ।
ವರಾಹ ಕಿಟಿ ಘೃಷ್ಟಿ ಪೋತ್ರಿನಾಮಂ ಕ್ರೋಡಂ ॥
ಹರಿಣಂ ವನಾಯು ವೇಣಂ ।
ಕುರಂಗ ಮೃಗ [ಶಲಲಿ ಶಲ್ಯಕಂ] ತಾನಕ್ಕುಂ ॥ ೨ ॥

ಶಿವೆ ಮೃಗಧೂರ್ತಂ ಗೋಮಾ ।
ಯು ವಂಚಕಂ ಜಂಬುಕಂ ಸೃಗಾಲಂ ನರಿ ಫೇ ॥
ರವ ಮುಱಿಗೆ ಬಳ್ಳು ಭಲ್ಲೂ ।
ಕ ವಚ್ಛಭಲ್ಲ [ಮೆನೆಕರಡಿ] ಭಾಲ್ಲೂಕ ಮಕ್ಕುಂ ॥ ೩ ॥

ಸಾರಂಗಂ ಪೃಷತಾಖ್ಯಂ ।
ಸೈರಿಭ ಕಾಸರ ಲುಲಾಯವೆನೆ ಮಹಿಷಂ ಗೌ ॥
ಧಾರಂ ಗೋಧೇರಂ ಮಾ ।
ರ್ಜಾರಂ ಪೃಷದಂಶ ವೋತು ಬೆಕ್ಕು ಬಿಡಾಳಂ ॥ ೪ ॥

ವೃಕ ವೀಹಾಮೃಗ ಮದು ಗಂ ।
ಡಕ ಮಕ್ಕುಂ ಖಳ್ಗಿ ಮುಸಳಿ ಗೋಧಿಕೆ ಸರಟಂ ॥
ಕೃಕಲಾಸಂ ಓಂಡಳಿ ಜಾ ।
ಹಕಂ ಬೃಹನ್ನಕುಳ ನಱಿಗೆ ಬಭ್ರು ವೆನಿಕ್ಕುಂ ॥ ೫ ॥

ಕಂ॥ ಪ್ಲವಗಂ ಕಪಿ ಮರ್ಕಟಕಂ ।
ಪ್ಲವಂಗಮಂ ಬಲಿಮುಖಾಹ್ವಯಂ ವಾನರ ನಂ ॥
ತವಱಿಶೊಳಗೆ ಜಾತಿಯಿಂ ಕೃ ।
ಷ್ಣವಕ್ತ್ರ ನಾಗಿರ್ಪುದಱಿಂಗೆ ಗೋಲಾಂಗೂಳಂ ॥ ೬ ॥

ಚಮರಂ ಗೋಕರ್ಣಂ ರುರು ।
ಸೃಮರಾಖ್ಯಂ ನ್ಯಂಕು ಕೃಷ್ಣಸಾರಂ ವಾತ ॥
ಪ್ರಮಿಯೆನೆ ಬೆಳ್ಮಿಗ ವಂತದು ।
ಚಮೂರ ವೃಕಸೂಕರಾದಿ ಕೋಱ್ಮಿಗ ಮಕ್ಕುಂ ॥ ೭ ॥

ಖನಕೋಂದುರು ಮೂಷಿಕ [ಮೂ
ಖು]ನಾಮುಮಿಲಿ ಮತ್ಕುಣಾಖ್ಯ [ಮುದ್ದಂಶಂ] ತಾ ॥
ನೆನಿಕುಂ ಲೂತಾಹ್ವಯ ಮೂ ।
ರ್ಣನಾಭ ಮದು ವೃಶ್ಚಿಕಂ ದ್ರುಣಂ ಕ್ರಿಮಿ ಕೀಟಂ ॥ ೮ ॥

ಶಕುನಿ ನಗೌಕಂ ಪತಗಂ ।
ಶಕುನ್ತಿ ಖಗ ವಂಡಜಂ ಪತತ್ರಿ ಪತಂಗಂ ॥
ವಿಕಿರಂ ಪಕ್ಷಿ ಶಕುಂತಂ ।
ಶಕುನಂ ವಿಹಗಂ ವಿ ವಿಷ್ಕಿರಂ ಪತ್ರರಥಂ ॥ ೯ ॥

ಪತ್ರ ತನೂರುಹ ವಾಜ ಪ ।
ತತ್ರ ಚ್ಛದ ಪಿಂಛ ಪಕ್ಷ ನಾಮಂ ಗಱಿ ಚಂ ॥
ಚೂ ತ್ರೋಟಿ ಚಂಚು ತುಂಡಂ ।
ಪತ್ರಂಗಳ ಮೊದಲೆಱಂಕೆ ಪಕ್ಷತಿ ಯಕ್ಕುಂ ॥ ೧೦ ॥

ಗಗನಾಂತರದೊಳೆವಾಡುವ ।
ಖಗಗತಿ ಡೀನಂ ಪ್ರಡೀನ ಮುಡ್ಡೀನಂ ಮ ॥
ತ್ತೊಗೆದ ತದಂಡಂ ತಾಂ ತ ।
ತ್ತಿ ಗೂಡು ನೀಡಂ ಕುಲಾಯ ಮಾವಱುಲಿ ವಿರುತಂ ॥ ೧೧ ॥

ಕಂ॥ ಕೇಕಿ ವಿನೀಳಗಳಂ ಪ್ರಚ ।
ಲಾಕಿ ಮಯೂರಂ ಕಳಾಪಿ ಶಿಖಿ ನವಿಲಕ್ಕುಂ ॥
ಕೇಕಾರುತಿ ವಿರುತಂ ಪ್ರಚ ।
ಲಾಕಂ ಬರ್ಹಂ ಶಿಖಂಡ ಮುದಱ ಕಳಾಪಂ ॥ ೧೨ ॥

ಜಳರಂಕು ಕಾಳಕಂಠಂ ।
ಬಳಾಕ ಬಿಸಕಂಠಿಕಾಹ್ವಯಂ ತಾನಕ್ಕುಂ ॥
ಕಳಹಂಸಂ ಕಾದಂಬಂ ।
ಕಳಕಂಠಂ ಕೋಕಿಲಂ ಪಿಕಂ ಪರಪುಷ್ಟಂ ॥ ೧೩ ॥

ಮ॥ಸ್ರ॥ ಗಿಳಿ ಕೀರಂ ತಾಂ ಶುಕಾಖ್ಯಂ ಜತುಕ ಮಜಿನಪತ್ರಾಹ್ವಯಂ ನೀಲಕಂಠಂ ।
ಕಳವಿಂಕಾಭಿಖ್ಯನಕ್ಕುಂ ಚಟಕ ಮಱಿಗೆ ತತ್ಖಂಜನಂ ಖಂಜರೀಟಂ ॥
ಜಳಕಾಕಂ ಮದ್ಗುನಾಮಂ ಕಳರವ ಮದು ಪಾರಾವತಾಖ್ಯಂ ಕಪೋತಂ।
ಬಳಿಪುಷ್ಟಂ ವಾಯಸಂ ಕೌಶಿಕರಿಪು ಕರಟಂ ಧ್ವಾಂಕ್ಷ ನೇಕಾಕ್ಷಿಗೋಳಂ
॥ ೧೪ ॥

ಕಂ॥ ಮೌಕುಳಿ ಕೃಷ್ಣಧ್ವಾಂಕ್ಷಂ ।
ಕಾಕೋಳಂ ದ್ರೋಣ ನಿನತನೂಜ ನೆನಿಕ್ಕುಂ ॥
ಕಾಕಾರಿ ಕೌಶಿಕಾಖ್ಯ ಮು ।
ಲೂಕಂ ಪಿಂಗಲಿ ನಿಶಾಟನಂ ತಾನಕ್ಕುಂ ॥ ೧೫ ॥

ಮೊಲಗಿಡಿಗಂ ಶ್ಯೇನಂ ಪ ।
ತ್ರ ಲಕ್ಷ್ಮಣಂ ಸಾರಸಾಹ್ವಯಂ ಶತಪತ್ರಂ ॥
ಸಲೆನೆಗಟ್ಟಿ ಭೃಂಗ ನಾಮಂ ।
ಕಳಿಂಗಮದು ಪೆಣ್ಣೆಭಂ? ಭರದ್ವಾಜಖಗಂ ॥ ೧೬ ॥

*ಉಪಜಾತಿ॥ ಕೋಕಂ ರಥಾಂಗಂ ಪೊಣರ್ವಕ್ಕಿ ಚಕ್ರಂ ।
ಸ್ತೋಕಾಹ್ವಯಂ ಚಾದಗೆ ಚಾತಕಂ ತಾಂ ॥
ಬಕಂ ಬಕೋಟಂ ಕಿಕಿದೀವಿ ಚಾಷಂ ।
ಶಕುಂತ ವಿನ್ನಂತದು ಭಾಸ ಮಕ್ಕುಂ ॥ ೧೭ ॥

* (ಇಂದ್ರವಜ್ರೋಪೇಂದ್ರ ವಜ್ರವೃತ್ತಂಗಳಿಂದಾದುಪಜಾತಿ ವೃತ್ತಮಿದು)
(ಕನ್ನಡ ಕಾವ್ಯಗಳಲ್ಲಿ ಈ ಬಗೆಯ ಉಪಜಾತಿ ವೃತ್ತಗಳನ್ನು
'ಪ್ರಾಯಿಕವಾಗಿ ಯಾರೂ ಪ್ರಯೋಗಿಸಿಲ್ಲ)

ಕಂ॥ ಕೊಂಚೆ ಯುದಕಕ್ಕುಂ ಪೆಸರಿಂ ।
ಕ್ರೌಂಚಂ ಕೃಕವಾಕು ತಾಮ್ರಚೂಡಾಭಿಖ್ಯಂ ॥
ತಾಂ ಚರಣಹೇತಿ ಕುಕ್ಕುಟ ।
ನಂಚೆ ಸಿತಚ್ಛದಖಗಂ ಮರಾಳಂ ಹಂಸಂ ॥ ೧೮ ॥

ಚರಣಾನನಂಗಳಾಧೂ ।
ಸರವಾಗಿರೆ ಮಲ್ಲಿಕಾಕ್ಷ ನವಱಿಕೊಳ್ ಕರ್ಪೊಂ ॥
ದಿರೆ ಧಾರ್ತರಾಷ್ಟ್ರನಾತಾ ।
ಮ್ರರುಚಿಯ ದಾದಂದು ರಾಜಹಂಸನೆನಿಕ್ಕುಂ ॥ ೧೯ ॥

ವರಟಾ ವರಾಳೆನಾಮಿಕೆ ।
ಮರಾಳವಧು ತದ್ವಿಲಾಸ ಕೇಳೀನಿಳಯಂ ॥
ಸರಸವನಕಮಳಿನೀವನ ।
ವಿರಾಜಿತಂ ಮಾನಸಂ ಸರೋವರಮಕ್ಕುಂ ॥ ೨೦ ॥

ಕ್ರಕರ ಕಪಿಂಜಳ ತಿತ್ತಿರಿ ।
ಚಕೋರ ಹಾರೀತ ಕುರವ ಕಾರಂಡವ ಲಾ ॥
ವಕ ಜೀವಂಜೀವಕ ಶಾ ।
ರಿಕಾದಿಗಳ್ ವಿಹಗಜಾತಿಯಕ್ಕುಂ ಪಲವುಂ ॥ ೨೧ ॥

ಅಳಿ ಷಟ್ಚರಣಂ ಮಧುಪಂ ।
ಶಿಳೀಮುಖಂ ಮಧುಕರಾಹ್ವಯಂ ಭೃಂಗಂ ಪು ॥
ಷ್ಪಲಿಹಂ ಮಧುವ್ರತಂ ಚಂ ।
ಚರೀಕ ಮಿಂದಿಂದಿರಂ ದ್ವಿರೇಫಂ ಭ್ರಮರಂ ॥ ೨೨ ॥

ಚೀರೀ: ಝಿಲ್ಲೀಕಾ ಭೃಂ ।
ಗಾರೀಶಬ್ದಂ ಸಮಾನವಾಚ್ಯಂ ತೆಧ್ಗಂ ॥
ಭೀರಾರಾವಂ ತಾಂ ಚೀ ।
ತ್ಕಾರಂ ಶಲಭಂ ಪತಂಗ ಮೆಂದಱಿಗಿವಱಿಕೊಳ್ ॥ ೨೩ ॥

ಕಂ॥ ವಾನೇಯಮ ಮಕ್ಷಿಕಾಭಿ ।
ಖ್ಯಾನಂ ದಂಶಂ ಪತಂಗಿ ಪತ್ರೈ ಯೆನಿಕ್ಕುಂ ॥
ಜೇನ ನೊಣಂ ಸರಘಾ ಕ್ಷುಂ ।
ದ್ರಾ ನಾಮಮಂ ಜ್ಯೋತಿರಿಂಗಣಂ ಖದ್ಯೋತಂ ॥ ೨೪ ॥

ಇಂತು

—ಮೃಗಪಕ್ಷಿವರ್ಗಂ—



ನಮಸ್ಸಿದ್ಧೇಭ್ಯಃ

# ಶ್ರೀ ವೀತರಾಗಾಯ ನಮಃ.

೧ ಅವಿಭಿನ್ನಾರ್ಥ ಕಾಂಡಂ. ೧೦ ಪುರಗೃಹೋಪಕರಣಾದಿ ವರ್ಗಂ.

* [ನೀವೃಜ್ಜನಪದ ದೇಶಮು ।
ಪಾವರ್ತನಮುತ್ತೆ ನಾಡು ಕಂಪಣನಾಮಂ ॥
ಆ ವಿಷಯಮೆನಿಪುದದಱೊಳೆ ।
ಗಾವುದು]ಕೃತವಾಸಮದು ಜನಂ ಪ್ರಜೆ ಲೋಕಂ ॥

ಕಂ॥ ಗ್ರಾಮಂ ಸಂವಸಥಾಖ್ಯಂ ।
ಗ್ರಾಮೀಣಂ ಗ್ರಾಮ್ಯ ನೆನಿಸುಗುಂ ತತ್ಪ್ರಭವಂ ॥
ಗ್ರಾಮಾಂತಿಕ ಮುಪಶಲ್ಯಂ ।
ಗ್ರಾಮಾಂತರ ಮವಧಿ ಸೀಮೆ ಸೀಮಾಘಾಟಂ ॥ ೧ ॥

ಅಯನಂ ಮಾರ್ಗಂ ಸೃತಿ ಸರ ।
ಣಿ ಯಧ್ವ ಮೇಕಪದಿ ಪದವಿ ಪದ್ಧತಿ ಪಂಥಂ ॥
ಪಯಣಂಬೋಪಾತಂ ಮಾ ।
ರ್ಗಯಾಯಿ ತಾಂ ಪಥಿಕ ನಧ್ವನೀನಂ ಪಾಂಥಂ ॥ ೨ ॥

ಮುನಿಜನ ನಿವಾಸ ಮಾಶ್ರಮ ।
ಮೆನಿಕ್ಕು ಮಾಭೀರಪಲ್ಲಿ ಘೋಷ ಮುದಕ್ಕುಂ ॥
ವನಮಧ್ಯಗತಂ ಶಬರೋ ।
ಪನಿಚಿತ ಮದು ಪಕ್ಕಣಂ ಪುಳಿಂದಸ್ಥಾನಂ ॥ ೩ ॥

---

* ಈ ಕಂದಭಾಗ ಮಾತ್ರವಿದೆ—ಪದ್ಯ ಸಂಖ್ಯೆಯಾದರೋ.—ಸೀಮಾಘಾಟಂ ಎಂಬಲ್ಲಿ ೧ ಎಂದಿದೆ. ಈ ಅರ್ಧಪದ್ಯಕ್ಕೆ ಸಂಖ್ಯೆಯೂ ಇಲ್ಲ. ಆದುದರಿಂದ ಹಲಾಯುಧ ನಿಘಂಟುವನ್ನನುಸರಿಸಿ ಈ ಕಂದವನ್ನು ಸೇರಿಸಿದೆ.

ಸ್ರ॥ ಗ್ರಾಮಮಂ ವೃತ್ಯಾವೃತಾಂತಂ ಪುರಮುಚಿತಚತುರ್ಗೋಪುರಾಟ್ಟಾಳಸಾಳಂ।
ಗ್ರಾಮಂಗಳಾತ್ತಮಪ್ಪೈನೂಱಿರ ತಲೆ ಯೆನೆ ಸಂದಿರ್ದುದಕ್ಕುಂ ಮಡೆಂಬಂ॥
ಭೂಮಿಾಧ್ರಂ ಸುತ್ತುಗೊಂಡೆತ್ತಲುಮಿರೆ ಪುದುವಿಂ ಕರ್ಬಡಂ ಸಿಂಧುಶೈಲೋ।
ದ್ದಾಮಾಖ್ಯಂ ಖೇಡ ಮಾದಂದದಱಿಗೆ ವಿಬುಧರಿರ್ದನ್ತದಂ ಬಾಡ ಮೆಂಬರ್॥

ಕಂ॥ ಜನನಾಥಸ್ಥಾನಂ ಶಿಬಿ।
ರನಿವೇಶಂ .. ..... ಪ॥
ತ್ತನ ನಿಗಮ ನಗರ ಪುಟಭೇ।
ದನ ನಗರೀ ಪೂಃ ಸಮಾಹ್ವಯಂ ಪುರಮಕ್ಕುಂ ॥ ೫ ॥

ಪರಿಖಾಭಿಖ್ಯಂ ಖೇಯಂ।
ಪರಿಧಿ ಪ್ರಾಕಾರ ವಪ್ರನಾಮಂ ಸಾಳಂ॥
ಪರಿಕೂಟಂ ಹಸ್ತಿನಖಂ।
ಪುರಗೋಪುರ ಮಕ್ಕು [ಮಟ್ಟ] ಮಟ್ಟಾಳಾಖ್ಯಂ ॥ ೬ ॥

ಪುರಮಧ್ಯದೊಳೊದವಿದ ಬೀ।
ದಿ ರಥ್ಯೆ ವಿಶಿಖಾಹ್ವಯಂ ಪ್ರತೋಳೀಮುಖ ನಿ॥
ಸ್ಸರಣಂ ಚತುಷ್ಪಥಂ ಚ।
ತ್ವರಮಕ್ಕುಂ ವಿಪಣಿ ಪಣ್ಯವೀಥೀನಾಮಂ ॥ ೭ ॥

ಭವನಂ ಸದನಂ ಸದ್ಮಂ।
ನಿವಾಸ ಮಾವಸಥ ಮಾಸ್ಪದಂ ನಿಳಯಂ ವೇ॥
ಶ್ಮ ಮಗಾರಂ ಶರಣಂ ಗೇ।
ಹ ಮಾಲಯಂ ಕುಟಿ ನಿಕೇತನಂ ಗೃಹ ಮುಟಜಂ ॥ ೮ ॥

ಗುಣನಿಲಯಂ ದೂಷ್ಯಂ ಕಾ।
ಣಮಂತದು ಕಾಯಮಾನ ಮೆಂಬುದನಿಕ್ಕುಂ॥
ತೃಣಕುಟಿ ಪುಲ್ಗುಡಿ ಕೃತರ।
ಕ್ಷಣವಿಧಿ ಸೆಱಿಾ ಯುಪ್ಪುದಱಿಗೆ ಕಾರಾಗಾರಂ ॥ ೯ ॥

ಕಂ॥ ಗೃಹಭೂಮಿ ವಾಸ್ತುಸಂಜ್ಞಂ ।
ಗೃಹಾಜಿರಂ ಪ್ರಾಂಗಣಂ ಗೃಹೋಪಗತಾವ ॥
ಗ್ರಹಿಣಿಯೆ ದೇಹಳಿ ಯಂತೆ ।
ಗರ್ಭಹ [ಮಪವರಕಂ] ಗೃಹೈಕದೇಶಂ ಪ್ರಘಣಂ ॥ ೧೦ ॥

ಭವನಾಂತರ ಕುಡ್ಯಂ ಭಿ ।
ತ್ತಿ ವಿತರ್ದಿ ವೇದಿಕಾಸಮಾಖ್ಯಾನಂ ಸ್ತಂ ॥
ಭ ಮದು ಸ್ಥೂಣಾಖ್ಯಂ ಬಾ ।
ದವಣಂ ವಾತಾಯನಂ ಗವಾಕ್ಷಂ ಜಾಳಂ ॥ ೧೧ ॥

ದ್ವಾರಂ ದ್ವಾರ್ವಲಜಂ ಪ್ರತಿ ।
ಹಾರಂ [ಪ್ರಚ್ಛನ್ನಮಂತೆದಂ]ತದ್ವಾರ್ರಂ ॥
ದ್ವಾರಾರ್ಗಳಮದು ಪರಿಘಂ ।
ದ್ವಾರಪಿಧಾನಂ ಕವಾಟ ಮಗುಳ್ದು ಯೆನಿಕ್ಕುಂ ॥ ೧೨ ॥

ದೇವಾಲಯ ಮಾಯತನಂ ।
ದೇವನರಾಧಿಪನಿಕೇತನಂ ಪ್ರಾಸಾದಂ ॥
ತಾವುಱದ ನೆಲೆಯ ಸೌಧಗೃ ।
ಹಾವಳಿಗಳ್ ಹರ್ಮ್ಯವೆಂಬಿವಕ್ಕುಂ ಕ್ರಮದಿಂ ॥೧೩ ॥

* ಉಪ॥ ವೃ॥ ನೃಪಾಲಯಾಂತರ್ಗತಕಕ್ಷೆ ಕೋಷ್ಠಂ ।
ಸೋಪಾನ ಮಾರೋಹಣ ಮೆಂಬುದಕ್ಕುಂ ॥
ಕಪೋತಪಾಲ್ಯಂ [ಮೆಱಗುಂ ವಿಟಂಕಂ ।
ಗೋಪಾನಸೀ ನಾಮಮೆ ಲೋವೆಗಕ್ಕುಂ ] ॥ ೧೪ ॥

ಕಂ॥ ಪೊದಯಿಸಿ ದಾಚ್ಛಾದನಮುಂ ।
ಛದಿಯುಂ ಪಟಳಮು ಮೆನಿಪ್ಪುದಱಗೆ ವಳೀಕಂ ॥
ಛದಿಪರ್ಯಂತಂ ನೆಮ್ಮಿ ।
ವ್ರ್ಭದು ತಾನದು ಮತ್ತ ವಾರಣಂ ಗಿರಿರೋಹಂ? ॥ ೧೫ ॥

* (ಉಪಜಾತಿವೃತ್ತಂ—ಇಂದ್ರವಜ್ರೋಪೇಂದ್ರವಜ್ರವೃತ್ತ ಸಂಕಲಿತಂ)

ಉ॥ ದ್ವಾರದ ಮೇಲೆ ಪಾಂಗಱಿದಮರ್ಚಿದ ದಾರು ಮದುತ್ತರಂಗ ಮಾ ।
ದ್ವಾರದ ಮುಂದೆ ಸಂಧಿಸಿರೆ ಕಟ್ಟಿದ ವಂದನಮಾಲೆ ತೋರಣಂ ॥
ದ್ವಾರದ ಪಕ್ಷಭಾಗದೊ [ಳೊಡಂ] ಬಡೆ ಮಾಡಿದುದಲ್ಲಿ ಪಕ್ಷಕ ।
ದ್ವಾರ ಮುಮರ್ಕೆವೆತ್ತೆಸೆದು ತೋರ್ಪ ತವಂಗ ಮದಿಂದ್ರಕೋಶಕಂ ॥ ೧೬ ॥

ಕಂ॥ ನೃಪತಿನಿಕೇತ ಸ್ಥಾನಕ ।
ಮುಪಕಾರ್ಯೆಮು ಮಂತದಕ್ಕು ಮುಪಕಾರಿಕೆಯುಂ ॥
ವಿಪುಳಮಣಿಕನಕರಜತ ।
ಪ್ರಪಂಚಸಂಭಾರಸಂಭೃತಂ ಕೋಶಗೃಹಂ ॥ ೧೭ ॥

ಅಂತಃಪುರಮೆನಿಕುಂ ಶು ।
ದ್ಧಾಂತಂ ರಾಜ್ಞೀನಿವಾಸಮವರೋಧಂ ಮ ॥
ತ್ತಂತದು ಶಯನಗೃಹಂ ಪ್ರಘ ।
ಣಾಂತರದೊಳ್ ವಾಸಭವನ ಮೆನೆ ಪೆಸರ್ವಡೆಗುಂ ॥ ೧೮ ॥

ರಸವತಿ ಮಹಾನಸಂ ಬಾ ।
ಣಸಿನ ಗೃಹಂ ಮಂಟಪಂ ಜನಾಶ್ರಯ ಮಸ್ತ್ರ ॥
ಪ್ರಸರಾಗಾರಂ ತಾಂ ಜಯ ।
ನಶಾಲೆ ಕಾರುಗಳ ಕರ್ಮಗೃಹ ಮನುವಾಸಂ ॥ ೧೯ ॥

ಅಕ್ಕರಂ॥
ಯತಿಕುಟೀರಕ ಮದು ಪರ್ಣಶಾಲೆ ದಲ್ ಮಂದುರಂ ತುರಂಗಮಶಾಲೆ ।
ಕ್ರಿತಹಟ್ಟ ಮಾಪಣಂ ಪಣ್ಯ ವಿಕ್ರಯಶಾಲೆ[ಯಾ]ವೇಶನಾಹ್ವಯಂ ಶಿಲ್ಪಶಾಲೆ॥
ಪ್ರತಿದೇಶಿಕಾಶ್ರಯಂ ಸತ್ತ್ರಶಾಲೆ ಪ್ರಪೆ ಯೆಂಬುದಱಿಗೆ ಪಾನೀಯಶಾಲೆ ।
ಸತತಂ ವಿದ್ಯಾರ್ಥಿಜನೋಚಿತಾಸ್ಪದಮಕ್ಕುಂ ಮಠಂ ಶಾಸ್ತ್ರಶಾಲೆ ॥ ೨೦ ॥

ಕಂ॥ ಪರಿಬರ್ಹಂ [ಪರಿವಾರಂ] ।
ಪರಿಚ್ಛದಂ ಪರಿಕರಂ ಪರಿಸ್ಪಂದಂ ಬಿ ॥
ತ್ತರಿಸುವ ಗೃಹೋಪಕರಣೋ ।
ಸ್ಕರ ಮುಪಕರ ಸಂಕರಶಬ್ದಮದು ಮನೆಯ ಕಸಂ ॥ ೨೧ ॥

ಕಂ॥ ಶಯನೀಯಂ ಪರ್ಯಂಕಂ ।
ಶಯನಂ ಶಯ್ಯಾಖ್ಯೆ ಪವಮತ ಪಮಾಸ್ತರಣ ಕುಥಾ ॥
ಹ್ವಾಯಮುಲ್ಲೋಚಂ ಚಂದ್ರೋ ।
ದಯಂ ವಿತಾನಾ(ಹ್ವಾಯ)ಮೆ(ನಲದು) ಮೇಲ್ಕಟ್ಟುಂ ॥ ೧೦ ॥

ಉಪಧಾನ ಮದುಚ್ಛೀರ್ಷಕ ।
ಮುಪಬರ್ಹಂ ಪ್ರಚ್ಛದಕ್ಕುಪಚ್ಛದ ನಾಮಂ ॥
ಅಪಟೀ ಪ್ರತಿಸೀರಾ ಕಾಂ ।
ಡಪಟಿ ತಿರಸ್ಕರಿಣಿಕಾಖ್ಯೆ ಜವನಿಕೆಯಕ್ಕುಂ ॥ ೧೨ ॥

ಆದರ್ಶಂ ಮುಕುರ (ಮೆನ ।
ದೆಲ್ಕಾ) ದರ್ಪಣ ಮಟಿಗೆ ತಾಳವೃಂತಂ ವ್ಯಜನಂ ॥
ಪಾದತ್ರಾಣ ಮುಪಾನತ್ ।
[ಪಾದುಕೆ] ತಾನಂತದನುಪದೀ[ನಾ] ನಾಮಂ ॥ ೧೪ ॥

ಆಸಂದಿ ವಿಷ್ಟರಂ ವೇ ।
ತ್ರಾಸನಕಂ ಪೀಠಮಾಸನಂ ಪೆಸರಿಂ ಭ ॥
ದ್ರಾಸನ ಮೆನೆ ಹೈಮಂ ರಾ ।
ಜಾಸನ ಮದು ಮುನಿಜನಾಸನಂ ಬ್ರಸಿಯಕ್ಕುಂ ॥ ೧೫ ॥

ಪಾತ್ರಂ ಭಾಂಡಂ ಸ್ಥಾಲಿ ಯ ।
ಮತ್ರಂ ಭಾಜನ ಮೆನಿಕ್ಕುಮಂತೆ ಸಮುಸ್ತಾ ॥
ಮತ್ರಮು ದಾವಪನಂ ಮಧು ।
ಪಾತ್ರಂ ಚಷಕಂ ಪತದ್ಗ್ರಹಾಖ್ಯಂ ಪಡಿಗಂ ॥ ೧೬ ॥

ಪೇಳಿಕೆಯದು ಮಂಜೂಷೆ ಕು ।
ಶೂಳಂ ಕುದಿರಟಿಗೆ ಶೂರ್ಪಕಂ ಪ್ರಸ್ಫೋಟಂ ॥
ಚಾಳನಿ ಯೆನೆ ಶಾರಣಿಕಂ ।
ಡೋಳಂ ಪಿಟಕಂ ಕಟಂ ಕಿಳಿಂಜಕ ಮಕ್ಕುಂ ॥ ೧೭ ॥

ಕಂ॥ ಮಂಗಳಕುಂಭಂ ಪೂರ್ಣಘ ।
ಟಂ ಗುಂಡಿಗೆ ಗುಂದಿಗಾಖ್ಯೆ ಕನಕಾಳುಗೆ ತಾಂ ॥
ಭೃಂಗಾರು ಹಸಂತಿಕೆ ಮ ।
ತ್ತಂಗಾರ ಶಕಟಿ(ಕೆ)ಯುದು ಹಸಂತಿಯುಂ ಮೆನಿಕುಂ ॥ ೨೮ ॥

ಕರಕಂ ಗಳಂತಿಕಾ ಕ ।
ರ್ಕರೀ ಸಮಾಹ್ವಂ ಘಟಂ ಕುಟಂ ಕಳಶ ಮಳಿಂ ॥
ಜರ ಮೆನೆ ಪಡಿಗುಂ ಮಣಿಕಂ ।
ಶರಾವ ಮದು ವರ್ಧಮಾನಕಂ ತಾನಕ್ಕುಂ ॥ ೨೯ ॥

ಅ.ವೃ॥ ಮಲ್ಲಿಕಾಖ್ಯಂ ಕಾಶಿಕೆ ಪಿರರಕಂ ತಾನುಖಾ ಸ್ಥಾಳಿ ಕುಂಡೆ ನಾಮ ।
ಮುಲ್ಲಸದ್ಧಂತಾದಿಸಾರದ್ಯವ್ಯಂಗಳೆ ಭಾಜನಮದು ಸಮುದ್ಗಕ ಮೆನಿಕುಂ ॥
ಗಲ್ಲಟಕಾಹ್ವಯಂ ಕಾವಲಿಯುದು ಜಿರೀಷಾಭಿಧಾನಂ ಭ್ರಾಷ್ಟ್ರವಂಬರೀಷಂ ।
ಚುಲ್ಲಿ ಯಶ್ಮಂತ ಮುತ್ಥಾನ ಮಂತಿಕೆ ಯೆನೆ ಯಧಿಶ್ರಯಣಿ ಯೆನಿಪ್ಪುದಕ್ಕುಂ
॥ ೩೦ ॥

ಕಂ॥ ಮಂಥಣಿ ಗರ್ಗರಿ ಕಡೆಗೋಲ್ ।
ಮಂಥಾನಂ ಮಂತು ಮಂತದಕ್ಕುಂ ಖಜಕಂ ॥
ಕಂಥೆ ಕವುಂದಿ ಕೃಶಾನುವಿ ।
ಮಂಥನಕಾಷ್ಠ ಮುಮದರಣಿಯೆನೆ ಪೆಸರ್ವಡೆಗುಂ ॥ ೩೧ ॥

ಮುಸಳ ಮಯೋಗ್ರ ಮೊರಲ್ಗಂ ।
ಪೆಸರಕ್ಕು ಮುಳೂಖಳಂ ಕಟಾಹಂ ಕುಂಡಂ ॥
ಕಸಕಿ[ಲೆನ]ಲ್ ಸಮ್ಮಾರ್ಜನಿ ।
ಯೆಸುವ ಶಿಳಾಪಟ್ಟಕಾಭಿಧಾನ ಮನಾಳ್ಗಂ ॥ ೩೨ ॥

ಪುದಿದೆಸೆದಿರ್ಪ್ಪರ್ಗಳೆಯ ಸೊಡರ್ ।
ಪ್ರದೀಪಕಂ ಕೇಶಮಾರ್ಜನಂ ಕಂಕತ ಮಂ ॥
ತೆದು ಕಂಬಿ ತದ್ರು ತಾಂ ದ ।
ರ್ವಿ ದಾರುಹಸ್ತಕ ಮೆನಿಪ್ಪುದದು ಖಜಕಾಖ್ಯಂ ॥ ೩೩ ॥

ಕಂ॥ ವಿವಧಂ ವೀವಧ ಮೆನಿಕುಂ ।
ಸು ವಿಹಂಗಿಕೆ ಭಾರಯಷ್ಟಿ ಗಕ್ಕುಂ ನಾಮಂ ॥
ಪ್ರವಿಲಂಬಿ (ತದವಿಹಂಗಿಕೆ) ।
ಪ್ರವಿಲಗ್ನಂ ನೆಲವು ಕಾಚಮಂ[ತದು] ಶಿಕ್ಯಂ ॥ ೩೪ ॥

ಮೃಗಬಂಧಿನಿ ವಾಗುರೆ ಬಲೆ ।
ಬಗೆಗಾನಾಯಂ ಕುವೇಣಿ ಬಡಿಶಂ ಜಾಳಂ ॥
ಖಗಬಂಧಂ [ಪಾಶಂ]ತಂ ।
ತ್ರಿ ಗುಣಂ [ವಟಿಕೂಟ] ಯಂತ್ರ ಮುನ್ಮಾದಾಂಕಂ ॥ ೩೫ ॥

ಕರಪತ್ರಂ ಕ್ರಕಚಾಖ್ಯಂ ।
ಕರಕಸಮದು ವಾಸಿ ತಕ್ಷಣೀನಾಮಂ ಕ ॥
ತ್ರ್ಯರಿ ತಾಂ ಕೃಪಾಣಿ ದೃಷದವ ।
ಧರಣಿ ಪೆಸರ್ಗೊಳ್ವುದಂತದಕ್ಕುಂ ಟಂಕಂ ॥ ೩೬ ॥

ಆವಿಕೆ ಚರ್ಮವಿಭೇದಿಕೆ ।
ಬೇವಂತದು ಮಾರವೆಂಬುದಕ್ಕುಂ ಪ್ರತಿಭಸ್ತ್ರಾ ॥
ದೀವಿವಿರೋಪಾಖ್ಯಂ ನ ।
ಧ್ರೀವಧ್ರೀಸಂಜ್ಞೆಯದು ವರತ್ರೆ ಯೆನಿಕ್ಕುಂ ॥ ೩೭ ॥

ಚೇಲಶಿಲಾದಿ ಕೃತಂ ಪಾಂ ।
ಚಾಳಿಕೆ ತಾನಕ್ಕುಮೆನೆವ ಪುತ್ರಿಕೆ ಲೀಲಾಂ ॥
ದೋಳಂ ಪ್ರಖ್ಯಾತಂ ಚಾಂ ।
ಡಾಳಿಕೆ ಚಂಡಾಳವಲ್ಲಕೀಪರ್ಯಾಯಂ ॥ ೩೮ ॥

ಇಂತು

—ಪುರಗೃಹೋಪ ಕರಣಾದಿವರ್ಗಂ—

ನಮಸಿದ್ಧೇಭ್ಯಃ

# ಶ್ರೀ ವೀತರಾಗಾಯ ನಮಃ.

ಅವಿಭಿನ್ನಾರ್ಥಕಾಂಡಂ　　　　　　　　　　೧೧ ಮನುಷ್ಯವರ್ಗಂ.

ಕಂ॥ ನೃ ನರ ಮನುಜನ್ಮ ಮಾನವ ।
ಮನುಷ್ಯ ಪಂಚಜನ ಮರ್ತ್ಯ ಸಂಜ್ಞಂ ಪುರುಷಂ ॥
ವನಿತೆ ವಧು ನಾರಿ ಸೀಮ ।
ಸ್ತ್ರಿನಿ ಯೋಷಿದ್ವಾಮೆ ಕೇವಳಂ ಸ್ತ್ರೀನಾಮಂ ॥ ೧ ॥

ಪ್ರಮದೆ ನಿತಂಬಿನಿ ಭಾಮಿನಿ ।
ರಮಣಿ ವರಾರೋಹೆ ರಾಮೆ ವಾಮಾಕ್ಷಿ ಮನೋ ॥
ರಮೆ ಲಲನೆ ಕಾನ್ತೆ ಎಂದಿ ।
ಸ್ತ್ರಿ ಮತ್ತಮಬಲಾವಿಶೇಷ [ಮುಂ ತಾಮ]ಕ್ಕುಂ ॥ ೨ ॥

ಸಹಚರಿ ಭಾರ್ಯೆ ಕುಟುಂಬಿನಿ ।
ಸಹಧರ್ಮಿಣಿ ಪತ್ನಿ ಜಾಯೆ ದಾರಂ ಕ್ಷೇತ್ರಂ ॥
ಮಹಿಳೆ ಪುರಂಧ್ರಿ ಕಳತ್ರಂ ।
ಗೃಹಿಣಿ ಗೃಹಂ ಸಜ್ಜನಕ್ಕೆ ಪೆಸರಿಂತನಿಸುಂ ॥ ೩ ॥

ಕುಲವಧು ಸಾಧ್ವಿ ಪತಿವ್ರತೆ ।
ಕುಲಪಾಳಿಕೆ ಸತಿ ಚರಿತ್ರವತಿಯಕ್ಕುಂ ಪುಂ ॥
ಶ್ಚಲಿ ಕುಲಟೆ ಯಸತಿ ಕುಲಪಾಂ ।
ಸುಳೆ ಬಂಧಕಿ ಜಾರಿಣಿ ಪಾಂಸ್ಳೆ ಯಿತ್ವರಿಕೆ ಯವಳ್ ॥ ೪ ॥

ಪ್ರಿಯತಮೆ ಸುಭಗೆ ವಿಳಾಸಿನಿ ।
ದಯಿತೆ ಮನಃಪ್ರೀತೆ ರುಚಿರೆ ವಲ್ಲಭೆ ತಾಂ ಹೃ ॥
ತ್ಪ್ರಿಯೆ ಯಕ್ಕುಂ ನಯನ [ಮನಃ] ।
ಪ್ರಿಯೆ ಸುಂದರಿ ಸುತನು ರೂಪವತಿ ಯೆನೆ ಪಡೆಗುಂ ॥ ೫ ॥

ಮ॥ ಕೃತಸಾ ಪತ್ನಿಕೆಯಪ್ಪ ... ... ಧಿವಿನ್ನಾಖ್ಯೆ ನಿ ।
ಷ್ಪತಿ ಪುತ್ರಾಂಗನೆ ತಾನವೀರೆ ಪತಿ (ವತ್ನೀ) ನಾಮೆ ದಲ್ ಭರ್ತೃ ಸಂ॥
ಯುತೆ ಕಾತ್ಯಾಯನಿ ಯರ್ಧವೃದ್ಧೆ ಪುನರೂಢಾಸ್ತ್ರೀ ಪುನರ್ಭೂಸಮಾ ।
ಖ್ಯೆ ಕರಂ ದ್ವ್ಯೋಹಿತೆಯುಂ ವಧೂಟಿ ಯೆನಿಕುಂ(ತಾಂ) ಪ್ರೌಢ ತತ್ತ್ವೋಕ್ತಿಯಿಂ ॥ ೬ ॥

ಕಂ॥ ದಾರಿಕೆ ಲಂಜಿಕೆ ಪಣವಧು ।
ವಾರಾಂಗನೆ ಗಣಿಕೆ ವೇಶ್ಯೆ ಯೆನೆ ಬೆಲೆವೆಣ್ ಸಂ ॥
ಚಾರಿಕೆ ತಾಂ ದೂದವಿ ಯುಭಿ ।
ಸಾರಿಕೆ ಸಂಕೇತನಕ್ಕೆ ಪೋಪವಳಕ್ಕುಂ ॥ ೭ ॥

ಗಳೆತ್ತುಗಾಳೆ ? ಚಿತ್ತಂ ।
ಗೊಳಲೆನಿತುಂ ಬಲ್ಲಳೆನಿಪವಳ್ ಕುಂಟಣಿ ಶಂ ॥
ಫಳಿ [ಚುಂಡೀ] ಯೆನೆ ನೆಗಟ್ಟಿಂ ।
ಕೆಳದಿಯೊಳಾಳೀ ಸಖೀವಯಸ್ಯಾ ಶಬ್ದಂ ॥ ೮ ॥

*ಪರವೇಶ್ಮಸ್ಥಿತೆ ಘುಟ್ಟವಳ್ತಿ ಪೆಸರಿಂ ಸ್ಯೈರಂಧ್ರಿ ಯಂತಃ ಪುರಾ ।
ಚರಿಯೆಂಬಳೀಕ್ಷಣಿಕೆ ಮುಗ್ಧಾಭೀಕ್ಷ್ಣ್ಯಮಾನಪ್ಪವಳ್ ॥
* * * * ॥ ೯ ॥

ಕನ್ನೆ ಕುಮಾರಿಕೆ ಕನ್ನಿಕೆ ।
ತಾನ್ನಗ್ನಿಕೆ ಗೌರಿ ಯೆಂಬಳಕ್ಕುಮವಳ್ ಸಂ ॥
ಪನ್ನ ಋತು ವಾಗದನ್ನಂ ।
ಮುನ್ನಂ ಕುಡೆಲಾದವಳ್ ಪತಿಂವರೆ ಯೆನಿಕುಂ ॥ ೧೦ ॥

ಉಪಯಾಮ ವಿವಾಹೋದ್ವಾ ।
ಹಪರಿಣಯಂ ಪಾಣಿಪೀಡನಕ್ಕಾಖ್ಯೆ ವರಂ ॥
ಗುಪಯಂತೃ ವಲ್ಲಭಂ ಭ ।
ರ್ತೃ ಪತಿಪ್ರಿಯ ನೆನಿಪುದಱಿಗೆ (ಮನ್ತ್ರ) ಭಿಧಾನಂ ॥ ೧೧ ॥

* ಎಂಬ ಅಶುದ್ಧವಾದ ಈ ಅರ್ಧಪದ್ಯಮಾತ್ರವಿದೆ. ಗ್ರಂಥವು ನಿರಂತರವಾಗಿ ಬರೆದಿದೆ.

ಕಂ॥ ನಿಧುವನ ರತ ಯಾಭ ಗ್ರಾ।
ಮ್ಯಧರ್ಮನಾಮಮಂ ವ್ಯವಾಯ ಮದು ಮೈಥುನಮುಂ॥
ವಿಧವೆ ವಿಶಸ್ತ್ರೆ ಸುವಾಸಿನಿ।
ವಧೂಟಿ ಚೇಟೀಸಮಾಖ್ಯೆ ದಾಸಿ ದಲಕ್ಕುಂ ॥ ೧೦ ॥

ಅವಿ ರಾತ್ರೆಯಿ ಮಲಿನಿಕೆ ಪು।
ಷ್ಪವತಿ ರಜಸ್ವಲೆ ಯದಕ್ಕೆ ಋತುಮತಿ ಮತ್ತಾ॥
ರ್ತವಮದು ರಜಮೆಂದುಂ ಪು।
ಷ್ಪವೆಂದು ಮವಿಭೇದ [ದಿಂದೆ ಪೇೞಲ್ಪ]ಡುಗುಂ ॥ ೧೩ ॥

ಗುರ್ವಿಣಿ ಧೃತಸತ್ವೆಯು ಮಂ।
ತರ್ವತ್ನಿ ಯೆನಿಪ್ಪೊಡಾಕೆ ಗರ್ಭಿಣಿ ಯೆನಿಕುಂ॥
ಗರ್ಭಿಣಿಗಳಪ್ಪ ಕಾಮಿನಿ।
ಯರ್ ಬಯಸುವ ಬಯಕೆ ದೋಹಲಂ ದೌಹೃದಮುಂ ॥ ೧೪ ॥

ಗರ್ಭಂ ಭ್ರೂಣಂ ಪೆಸರೊಳ್।
ಗರ್ಭಾಶಯ ಮದು ಜರಾಯುಜಂ ಜನನಂ ಪ್ರ॥
ದುರ್ಭವನಂ ವಟು ಮಾಣವ।
ಕಾರ್ಭಕಬಾಳಂ ಸ್ತನಂಧಯಾಖ್ಯಂ ಡಿಂಬಂ ॥ ೧೫ ॥

ಸೂತಿಕೆ ಜಾತಾಪತ್ಯೆ ವಿ।
ಜಾತೆ ವಿಶಲ್ಯಾಭಿಧಾನೆ ತಾನೆನಿಕುಂ ತ॥
ತ್ಸೂತಿನಿಕಾಯಮರಿಷ್ಟ ನಿ।
ಕೇತಾಖ್ಯಂ ಸೂತಿಮಾಸಮದು ವೈಜನನಂ ॥ ೧೬ ॥

ವೃ॥ ಜನನಿ ಸವಿತ್ರಿ ಮಾತೃ ಸುಮು ತಾಯ್ ಜನಕಂ ಪಿತೃವಪ್ಪ ತಂದೆ ನಂ।
ದನ ತನುಜನ್ಮ ತೋಕ ಸುತ ಪುತ್ರ ತನೂಭವ ಸೂನು ನಾಮಕಂ॥
ತನಯನದಲ್ಲಿ ಪೆಣ್ ದುಹಿತೃ ನಂದನೆ ಪುತ್ರಿ ತನೂಜೆ ಸೂತಿ ತಾ।
ನೆನಿಕು ಮಪತ್ಯಶಬ್ದಮದು ಕೇವಲಮಾತ್ಮಜವರ್ಗವಾಚಕಂ ॥ ೧೭ ॥

ಕಂ॥ ಸೋದರ್ಯಂ ಭ್ರಾತೃ ಸವಾ।
ನೋದರ್ಯಂ ಸೋದರಂ ಸಗರ್ಭ್ಯಂ ಪೆಣ್ಣಾ॥
ಸೊದಂದು ಸ್ವಸೃ ಸಹಜೆ ಸ।
ಹೋದರಿ ಸಹಜಾತೆ ಭಗಿನಿ ಯೆನೆ ಪೆಸ[ರಕ್ಕುಂ] ॥ ೧೮ ॥

ಅನುಜಂ ಕನೀಯ ನವರಜ।
ನನುಜನ್ಮಂ ತಮ್ಮ ನಗ್ರಜಂ ಜ್ಯೇಷ್ಠಂ ಜ್ಯಾ॥
ಯ ನೆನಿಕ್ಕು ಮವರ್ಗೆ ಸವತಿಯ।
ತನಯಂ ಸಾಪತ್ನ್ಯ ನಂತವಂ ದಾಯಾದ್ಯಂ ॥ ೧೯ ॥

ಪಿತೃವಿನೊಡೆಹುಟ್ಟಿದಾತಂ।
ಪಿತೃವ್ಯ ನಂಬಿಕೆಯ ಸೋದರಂ ಮಾತುಲಕಂ॥
ಸತಿಯ ಸಹಜಾತ ನಕ್ಕುಂ।
ಪ್ರ[ತೀ]ತಿಯಿಂ ಸ್ಯಾಲನಾಮನುಂ ದೇವರನುಂ ॥ ೨೦ ॥

ತಂದೆಯ ತಂದೆ ಪಿತಾಮಹ।
ನೆಂದಱಿವುದು ತಾಯ ತಂದೆ ಮಾತಾಮಹನೆಂ॥
ಬೊಂದೆಭುವರ್ಗಳೆ......... ।
ತಂದೆಗಮಕ್ಕುಂ ಪ್ರಕರ್ಷದಿಂದೆ ... ನಾಮಂ ॥ ೨೧ ॥

ಮಗಳಮಗಂ ದೌಹಿತ್ರಂ।
ಮಗನ ಮಗಂ ನಪ್ತೃ ಪೌತ್ರ ನೆನಿಕುಂ ಸ್ನುಷೆ ತಾಂ॥
ಮಗನ ವಧು ಮಗಳೆ ವರನುಂ।
ನೆಗಳ್ಗುಂ ಜಾಮಾತೃವೆಂಬ ಸಂಜ್ಞಾಂತರದಿಂ ॥ ೨೨ ॥

ಭ್ರಾತೃಸುತಂ ಭ್ರಾತೃವ್ಯಂ।
ಭ್ರಾತೃವಧೂ ಪ್ರತಿಕೆ? ಯಾತೃಗಳ್ ತಮ್ಮೊಳವರ್॥
ಭ್ರಾತೃವಧು ತಾಂ ಪ್ರಜಾವತಿ।
ಮಾತುಳವಧು ಮಾತುಳಾನಿಯುಕ್ಕುಂ ಪೆಸರಿಂ ॥ ೨೩ ॥

ಕಂ॥ ಸ್ವಸೃತನಯಂ ಸ್ವಸ್ರೀಯಂ ।
ಪೆಸರಿಂ ನಾದುನಿ ನನಾಂದೃ ನಂದಿನಿಯೆನಿಕುಂ ॥
ಶ್ವಶುರಶ್ವಶ್ರೂನಾಮವ ।
ದೆಸೆಗುಂ ಕೂಸಿತ್ತಮಾವನೊಳಮತ್ತೆಯೊಳಂ ॥ ೨೪ ॥

ಉಪಮಾತೃ ಧಾತ್ರಿ ತತ್ಸ್ವ ।
ತ್ರಿ ಪೇೞಿ ಧಾತ್ರೇಯಿಯುಂ ಭುಜಿಷ್ಯೆಯು ಮಕ್ಕುಂ ॥
ಉಪಪತಿ ಜಾರ ನವಂಗೞಿ ।
ಯೆ ಪುಟ್ಟಿದಂ ಜಾರಜಾತ ನಾತಂ ಕುಂಡಂ ॥ ೨೫ ॥

ಉಪಗತೆಪುಂವೇಷದ ಯೋ ।
ಷೆ ಪೋಟಿ ಕೂಟದಾಸಿ ಬೋಟಿ ಯೆನಿಕುಂ ಕ್ಲೀಬ ॥
ವ್ಯಪದೇಶಂ ವರ್ಷವರಂ ।
ನಪುಂಸಕಂ ಪೇಡಿ ಷಂಡಕಂ ತಾಂ ಷಂಡಂ ॥ ೨೬ ॥

ನವವಯಸಂ ತರುಣಂ ಯುವ ।
ನವ[ಂವ]ಯಸ್ಥ [ನೆನೆ]ಯಾತಯಾಮಂ ವೃದ್ಧಂ ॥
ಸ್ಥವಿರಂ ತಾಂ ವರ್ಷೀಯಂ ।
ಪ್ರವಯಂ ಜೀರ್ಣಂ ಜರಾರ್ದಿತಂ ದಶಮೀಸ್ಥಂ ॥ ೨೭ ॥

ಬಂಧು ಸನಾಭಿ ಸಗೋತ್ರಂ ।
ಬಾಂಧವ ನಾತ್ಮೀಯ ನೆನಿಸುಗುಂ ಜ್ಞಾತಿ ಯುಮಂ ॥
ಬಂಧುಸಮೂಹಂ ಕೃತ ನಂ ।
ಬಂಧಂ ಬಂಧುತೆ ನಿಜಾಪ್ತವರ್ಗಂ ನಂಟರ್ ॥ ೨೮ ॥

ಸಂತತಿ ವಂಶಂ ಗೋತ್ರಂ ।
ಸಂತಾನಂ ಜನನ ಮನ್ವವಾಯಂ ಕುಲ ಮಿಂ ॥
ನಂತವೞಿಕೆಯೊಳ್ ಜನಿಯಿಸಿದಾ ।
ತಂ ತಾಂ ಸ್ವಜನಂ ಸ್ವಬಂಧು ವನ್ಯಂ ಕುಲ್ಯಂ ॥ ೨೯ ॥

ಕಂ॥ ಕ್ಷಿತಿಯೊಳ್ ವರ್ತಿಸುಗುಂ ಕ್ರಮ ।
ಗತಿಯಿಂದಂ ಬ್ರಾಹ್ಮಣಾದಿ ವರ್ಣಂ ನಾಲ್ಕುಂ ॥
ಚತುರಾಶ್ರಮಮುಮುಂ ಶ್ರುತಿಬೋ (ಚೋ ।
ದಿ) ಧಿತೋಕ್ತಿಯಿಂ ಬ್ರಹ್ಮಚಾರಿ ಮೊದಲೆನೆ ನೆಗೞ್ಗುಂ ॥ ೨೦ ॥

ಸಲೆ ಭೈಕ್ಷೆ ಮಶನ ಮಜಿನಂ ।
ಪಲಾಶದಂಡಂ ಜಟಾಳಿ ಕೌಪೀನಂ ಮೇ ॥
ಖಳೆ ಯೆಂಬಿಂತಿವೆ ಪೇೞ್ದಾ ।
ತ್ಮಲಿಂಗದೊಳ್ ಬ್ರಹ್ಮಚಾರಿ ವರ್ಣಿ ಯೆನಿಕ್ಕುಂ ॥ ೨೧ ॥

ದೇವಾತಿಥಿ ಪಿತೃಪೂಜಕ ।
ನಾವಿರ್ಭೂತ ಸ್ವಕೀಯ ಕರ್ಮಾಜೀವಂ ॥
ಪಾವನಚರಿತಂ ಸಕಲಗು ।
ಣಾವಸಥಂ ಗೃಹಸ್ಥ ನಂತವನಕ್ಕುಂ ॥ ೨೨ ॥

ಯತಿ ಸಂಯಮಿ ಋಷಿ ಮುನಿ ಸು ।
ಶ್ರುತ ನಾತಂ ಸಾಧು ಯೋಗಿ ತಾಪಸ ನಾತಂ ॥
ವ್ರತಿ ಯಕ್ಕುಂ ಮೌಖಂ ದೀ ।
ಕ್ಷಿತ ನನ್ತೇವಾಸಿ ಶಿಷ್ಯ ನೆನಿಕುಂ ಛಾತ್ರಂ ॥ ೨೩ ॥

ವಾನಪ್ರಸ್ಥ ನವಂ ವೈ ।
ಖಾನಸ ನೆಂದಱಿಗೆ ಭಿಕ್ಷು ಕರ್ಮಂದಿ ಯವಂ ॥
ಪೀನಂ ಪಾರಿವ್ರಾಜಂ ।
ತಾನಕ್ಕುಂ ಸರ್ವಲಿಂಗ ಮದು ಪಾಷಂಡಂ ॥ ೨೪ ॥

ಆಚಮನ ಮುಪಸ್ಪರ್ಶಂ ।
ಶೌಚಂ ಬಹಿರಾತ್ಮಶುದ್ಧಿ ಜಪ ಮಘಮರ್ಷಂ ॥
ವಾಚಂಯಮವಿಧಿ (ಮೌನ) ಮು ।
ಪಾಚರಣಂ ಪರ್ಯುಪಾಸ್ತಿ ಶುಶ್ರೂಷಾಖ್ಯಂ ॥ ೨೫ ॥

ಕಂ॥ ಪರ್ಯಂಕಂ ಪರಿಕರ ಮೆನೆ ।
ಪರ್ಯಸ್ತಿಕೆ ನಿತ್ಯಕರ್ಮ ಮದು ಯಮ ಮಕ್ಕುಂ ॥
ಪರ್ಯಟನಂ ತಾನೀರ್ಯಾ ।
ಚರ್ಯಾರ್ಥಂ ಪರಿಮಿತವ್ರತಸ್ಥಿತಿನಿಯಮಂ ॥ ೩೬ ॥

ದ್ವಿಜ ವಿಪ್ರ ಭೂಮಿದೇವಾ ।
ಗ್ರಜನ್ಮ ಬಾಡವ ಸಮಾಹ್ವಯಂ ಬ್ರಾಹ್ಮಣ ನಾ ॥
ದ್ವಿಜರೊಳಗೆ ಜಾತಿಮಾತ್ರೋ ।
ಪಜೀವಿಯುಂ ಬ್ರಾಹ್ಮಣವ್ರತಂ ತಾವೆಂಬರ್ ॥ ೩೭ ॥

ಆತ್ತವ್ರತ ಸಂಸ್ಕಾರ ನಿ ।
ವರ್ತ್ತಿತ ನವಕೀರ್ಣನುಂ ನಿರಾತ್ಮನು ಮಕ್ಕುಂ ॥
ವೃತ್ತಾಧ್ಯಯನಂಗಳ ಸಂ ।
ಪತ್ತಿಬಲಂ ಬ್ರಹ್ಮವರ್ಚಸಂ ತಾನಕ್ಕುಂ ॥ ೩೮ ॥

ವೇದಂಗಳನಿತಱಿೊಳೆ ಮಿವ ।
ನೋದಾಳೆ ಯೆನಿಪ್ಪನಱಿ ಗನೂಚಾನ ನವಂ ॥
ವೇದದೊಳೊಂದನಿಸಿರ್ಪೊಡೆ ।
ಪೋದಿನ ಮಾತಿಲ್ಲದಂ ನಿರಾಕೃತಿ ಯಕ್ಕುಂ ॥ ೩೯ ॥

ಯಜನಾದಿ ಕರ್ಮನಿರತಂ ।
ದ್ವಿಜೋತ್ತಮಂ ಶ್ರೋತ್ರಿಯಂ............... ॥
............................ ।
................................................ ॥ ೪೦ ॥

[ಕ್ರತು] ಯಾಗ ಮಧ್ವರಂ ಸ ।
ಪ್ತತಂತು ಸತ್ರಂ ಮಖಂ ಸವಂ ಯಜ್ಞಂ ಸಂ ॥
ಸ್ಕೃತಭೂಮಿ ವೇದಿ ವಹ್ನಿ ।
ತ್ರಿತಯಂ ತ್ರೇತಾಗ್ನಿ ಗಾರ್ಹಪತ್ಯಪ್ರಮುಖಂ ॥ ೪೧ ॥

ಕಂ॥ ಹವಿ ಸಾನ್ನಾಯ್ಯಂ ಚರು ಹ ।
ವ್ಯವಾಹನೊಳು ವಿಧಿಹುತಂ ವಷಟ್ಕೃತ ಮಕ್ಕುಂ ॥
ಸವ ನಿರ್ವರ್ತನ ಮವಭೃಥ ।
ಸವನಂ ವಿಶ್ರಾಣನಂ ವಿತರಣಂ ದಾನಂ ॥ ೪೨ ॥

ಇಷ್ಟಂ ಯಾಗಾರ್ಥದೊಳು ।
ತ್ಕೃಷ್ಟಂ ಪೂರ್ತಂ ವದನ್ನ ? ಹೇತುವಿಕೀರ್ಣಂ ॥
ಇಷ್ಟಾಪೂರ್ತಂಗಳವು ।
ತ್ಕೃಷ್ಟಶ್ರೇಯೋನಿಮಿತ್ತ ಮಕ್ಕುಮವೆರಡುಂ ॥ ೪೩ ॥

ಪಿತೃದಾನ ಮದು ನಿವಾಪಂ ।
ಪ್ರತಿನಿಯತಂ ಶಾಸ್ತ್ರವಿಹಿತಕರ್ಮಂ [ಶ್ರಾದ್ಧಂ] ॥
ಪಿತೃಸವನ ಮಪಸ್ನಾತಂ ।
ಮೃತದಿನದೊಳ್ಮಾಳ್ಪುದೌರ್ಧ್ವದೈಹಿಕ ಮಕ್ಕುಂ ॥ ೪೪ ॥

ಪ್ರೇತಂ ಮೃತಂ ಪರಾಸು ಪ ।
ರೇತಂ ಮೃತಿ ಮೃತ್ಯು ಮರಣ ಮೆನೆ ಪಂಚತ್ವಂ ॥
ವೀತಾಸು ಶವಂ ಕುಣಪಂ ।
ಪ್ರೇತವನಂ [ಮೃತ ವನಂ] ಶ್ಮಶಾನ ಮದಕ್ಕುಂ ॥ ೪೫ ॥

ಪರಲೋಕಮುೞಿಗೆ ಲೋಕಾಂ ।
ತರ ಮಕ್ಕುಂ ದೇವಭೂಮಿ ಯದು ದೇವತ್ವಂ ॥
ಪುರುಷಾರ್ಥಂ ವರ್ಗತ್ರಯ ।
ಪರಿಕಲ್ಪಿತ ಮಪ್ಪ ಧರ್ಮಕಾಮಾರ್ಥಂಗಳ್ ॥ ೪೬ ॥

ಅವನೀಪತಿ ರಾಜಂ ಪಾ ।
ರ್ಥಿವಂ ನೃಪಂ ಕ್ಷತ್ರಿಯಂ ಜನಾಧಿಪ ನರಸಂ ॥
ಭುವನೈಕವಲ್ಲಭಂ ಚ ।
ಕ್ರವರ್ತಿ ಮೂರ್ಧಾಭಿಷಿಕ್ತ ನವನಧಿರಾಜಂ ॥ ೪೭ ॥

ಕಂ॥ ಅರಸಂ ಪೆರ್ಗಡೆ ಜನಪದ ।
ವರಿವೆನಿಸುವ ಕೋಟಿ ಕೋಶ ಮಾಯತ್ತಂ ಬಂ ॥
ಧುರವೃತ್ತಮಿತ್ರ ನೆಂದಿಂ ।
ತು ರಾಜ್ಯಮಕ್ಕುಂ ವಿಚಾರಿಸಲ್ ಸಪ್ತಾಂಗಂ ॥ ೪೮ ॥

ಭಟ್ಟಿನಿಯರ್ ನೃಪಸತಿಯರ್ ।
ಪಟ್ಟಮಹಾದೇವಿ ಯಗ್ರಮಹಿಷಿ ಯೆನಿಕ್ಕುಂ ॥
ಪಟ್ಟಕ್ರಮಕ್ಕೆ ಮುನ್ನಂ ।
ಪಟ್ಟದ ನೃಪತನಯನನ್ತವಂ ಯುವರಾಜಂ ॥ ೪೯ ॥

ನರಪತಿ(ಯ) ಬುದ್ಧಿಸಚಿವಂ ।
ಪರಿಚಿತ ನಯಶಾಸ್ತ್ರ ನಪ್ಪವಂ ಮಂತ್ರಿ ಮಹೋ ॥
ದ್ಧುರಭಾರಕ್ಷಮ ಮುಪಧಾ ।
ಪರಿಶುದ್ಧಂ ಕರ್ಮಸಚಿವ ನಕ್ಕು ಮಮಾತ್ಯಂ ॥ ೫೦ ॥

ರಸಿಕಂ ಕೇಳಿಕರಂ ನ ।
ರ್ಮಸಚಿವ ನಧ್ಯಕ್ಷ ನಧಿಕೃತಂ ಪ್ರಿಯೆಯೊಳ್ ॥
ಪೆಸರಿಂ ಪ್ರಕ್ರಿ? ಯೆನಿಕುಂ ।
ರಸವತಿ ಮೊದಲಾಗೆ ಪೆಱವುಮಧಿಕಾರಂಗಳ್ ॥ ೫೧ ॥

ಉಪೇಂದ್ರ ॥ ಆರಾಳಿಕಂ ಪಲ್ಲವಸೂಪ ಸೂಪ ।
ಕಾರಾಹ್ವಯಂ ಬಾಣಸಿಗಂ ವಿಧಿಜ್ಞಂ ॥
ಪೌರೋಗವಂ ಸೂಪ ಮಹಾನಸಾಧಿ ।
ಕಾರಸ್ಥಿತಂ ಭಕ್ತಿಗುಣಾನುರಕ್ತಂ ॥ ೫೨ ॥

ಕಂ॥ ಅಂತಃಪುರದೊಳ್[ಗ]ಧಿಕೃತ ।
ನಂತರ್ವಂಶಿಕ ನೆನಿಪ್ಪನಕ್ಕುಂ ಸ್ಥಾಪ ॥
ತ್ಯಂ ತಾಂ ಕಂಚುಕಿ ದಲ್ ಬಗೆ ।
ಗಂತಾತನೆ ಸೌವಿದಲ್ಲನುಂ ಸೌವಿದನುಂ ॥ ೫೩ ॥

ಕಂ॥ ಸೇನಾನಿ ವಾಹಿನೀಪತಿ ।
ತಾನಕ್ಕುಂ ವಡೆವಳೆಂ ಪ್ರಶಾಂತ ಹಿತಾನು ॥
ಷ್ಣಾನರತಂ ಕೃತಶಾಂತಿವಿ ।
ಧಾನಂ ಸೌವಸ್ತಿಕಂ ಪುರೋಹಿತ ನಾತಂ ॥ ೫೪ ॥

ದ್ವಾರನಿಯುಕ್ತಂ ತಾಂ ಪ್ರತಿ ।
ಹಾರಂ ದೌವಾರಪಾಳಕಂ ದ್ವಾಸ್ಥರ್ಂ ದೌ ॥
ವಾರಿಕ ನೆನೆ ಪಡಿಯಱಿ ನಾ ।
ವಾರವಿದಂ ನ್ಯಾಯದೃಗ್ವಿವಾಕಂ ಸ್ಥೇಯಂ ॥ ೫೫ ॥

ಕಾರ್ತಾಂತಿಕಂ... ।
ಹೊರ್ತಿಕ ದೈವಜ್ಞನಾ ದಿಶಿಗಣಕಂತಾನಕ್ಕುಂ ॥
..................ಮೌ ।
ಹೊರ್ತಿಕ ಜ್ಯೋತಿಷ.........ತಂತ್ರಜ್ಞಂ ? ॥ ೫೬ ॥

ಗೋವಿಂದಂ ಗೋಧಿಕೃತಂ ।
ಗೋವಂ ನಿಯತಾಧಿಕಾರ ನಱಿಗಾಯುಕ್ತಂ ॥
ಸೇವಕನನುಚರ(ನವ)ನುಪ ।
ಜೀವಿನರಂ ಕಿಂಕರಂ ಭುಜಿಷ್ಯಂ ದಾಸಂ ॥ ೫೭ ॥

ಆ ಸೇವೆ ಯುಪಾಸನೆ ವಿ ।
ಶ್ವಾಸಂ ವಿಸ್ರಂಭ ನಾಮ ಮವ್ಯಭಿಚಾರಂ ॥
ಶಾಸನ ಮಾಜ್ಞೆಯು ಮಾದೇಶಂ ।
ಶಾಸನಹರ ನಱಿಗೆ ಲೇಖವಾಹಂ ದೂತಂ ॥ ೫೮ ॥

ಅಪಸರ್ಪಂ ಚಾರಂ ಗೂ ।
ಢಪುರುಷಂ ಪ್ರಣಿಧಿ ಹೇರಿಕಂ ಸ್ಪಶ ನೆನಿಕುಂ ॥
ಲಿಪಿಕಾರಂ ಲೇಖಕನಾ ।
ಲಿಪಿಯುಂ ಲಿಖಿ[ವಿ]ಲಿಖಿತಾಕ್ಷರಾಳಿನ್ಯಾಸಂ ॥ ೫೯ ॥

ಕಂ॥ ಉಪಧಾ ಪ್ರಾಭೃತನಾಮಕ ।
ಮುಪಾಯನಂ ಬಲಿ ಕರಾಹ್ವಯಂ ಸಿದ್ಧಾಯಂ ॥
ಉಪದಾನಮು ಮುತ್ಕೋಚಮು ।
ಮುಪಚಾರಂ ಲಂಚ ಮಾಮಿಷಾಖ್ಯ ಮದಕ್ಕುಂ ॥ ೬೦ ॥

ಅರಸು ನೃಪಲಕ್ಷ್ಮ ತಾನಾ ।
ಧಿರಾಜ್ಯ ಮೆನಿಕುಂ ನೃಪೇಂದ್ರಚಿಹ್ನಂ ಕಕುದಂ ॥
ಹರಿಪೀಠ ಮಾಸನಂ ಚಾ ।
ಮರಂ ಪ್ರಕೀರ್ಣಕ ಮದಾತಪತ್ರಂ ಛತ್ರಂ ॥ ೬೧ ॥

ಊರುಭವಂ ಭೂಮಿಸ್ಪೃಶ ।
ನೂರವ್ಯಂ ವೈಶ್ಯ ನರ್ಯ್ಯ ನೆನೆ ಪರದ ನವಂ ॥
ಗಾರಂಬಂ ವಾಣಿಜ್ಯಂ ।
ಗೋರಕ್ಷಣ ಮೆಂಬ ವಾರ್ತ್ತೆ ಜೀವಿಕೆ ಯಕ್ಕುಂ ॥ ೬೨ ॥

ವಣಿಜಂ ವೈದೇಹಂ ಪಾ ।
ಪಣಿಕಂ ಪಣ್ಯಾಖ್ಯಜೀವಿ ವಾರ್ಧುಷಿಕಂ ದ್ವೈತ ॥
ಗುಣಿಕಂ ವೃದ್ಧ್ಯಾಜೀವಂ ।
ರಿಣ ಮಱಿಗದು ಪರ್ಯ್ಯುದಂಚನಂ ತಾನಕ್ಕುಂ ॥ ೬೩ ॥

ಸತ್ಯಾನೃತ ಮದು ಪರದಪ ।
ಮಿತ್ಯಕ ಮುದ್ಧಾರ ಮರ್ಥವಿಕ್ರೀತಿ ಪರಾ ॥
ವೃತ್ತ್ಯಾಖ್ಯಂ ವಿನಿಮಯನಂ ।
ಸತ್ಯಂಕಾರಂ ಪಣಾರ್ಪಣಂ ಸಂಚಕರಂ ॥ ೬೪ ॥

ವೃದ್ಧಿ ಕಳಾಂತರ ಮಂತದು ।
ವೃದ್ಧಿಯಿ ನುಪಜೀವಿಸಿರ್ಪ್ಪುದಱಿಂಗೆ ಕುಸೀದಂ ॥
ವೃದ್ಧಿ ವಿಭೂತಿ ಧನಾಶಾ ।
ವೃದ್ಧಿ ಧನಾಯಾಖ್ಯೆ ಧನಿ ಧನಾಧಿಕ ನಾಢ್ಯಂ ॥ ೬೫ ॥

ಕಂ॥ ಅಧಮರ್ಣಂ ಋಣಸ್ಥಂ ದಾ ।
ತೃ ಧನಿಕ ನವೆನುತ್ತಮರ್ಣ ನೆಕ್ಕುಂ ಪೆಸರಿಂ ॥
ದಧನಂ ದುರ್ಗತಿಕಂ ದು ।
ರ್ವಿಧ ನೆಂದಱಿಗಿಲ್ಲದಂ ದರಿದ್ರಂ ನಿಸ್ವಂ ॥ ೬೬ ॥

ಕೃಷಿಕಂ ಕ್ಷೇತ್ರಾಜೀವಂ ।
ಕೃಷೀವಳಂ ಕರ್ಷಕಂ ಕುಟುಂಬಿ ಯೆನಿಕ್ಕುಂ ॥
ಕೃಷಿ ತತ್ಕರ್ಮ ಮದಕ್ಕುಂ ।
ವಿಷಯಂ ಕೇದಾರ ಭೂಮಿ ವಪ್ರಂ ಕ್ಷೇತ್ರಂ ॥ ೬೭ ॥

ಹಳೆ ಸೀರಾಭಿಖ್ಯಂ ಲಾಂ ।
ಗಲ ಮೀಷಾಹ್ವಯ ಮದೀಸು ಫಾಳಂ ಕುಶಿರಂ ॥
ಹಳೆಪದ್ಧತಿ ಸೀತಾಖ್ಯಂ ।
ಕಳೋತ್ಥಳಂ ಮೇಧಿ ಮೇಧಿ ದಾಮವಿರಾಮಂ ॥ ೬೮ ॥

ದಾತ್ರಂ ಲವಿತ್ರ ಮಱಿಗೆ ಖ ।
ನಿತ್ರಂ ಕುದ್ದಾಲ ಮದುವೆ ಗೋದಾರಣಕಂ ॥
ತೋತ್ರಂ ಪ್ರಾಜನ ಮಕ್ಕುಂ ।
ಯೋತ್ರ ಮದಾಬಂಧಯೋಕ್ತ್ರ ರಶ್ಮಿ ಸಮಾಖ್ಯಂ ॥ ೬೯ ॥

ಕೃಷ್ಟಂ ಕ್ಷೇತ್ರಂ ಸೀತ್ಯಂ ।
ಲೋಷ್ಟಂ ಲೋಷ್ಟಕಸಮಾಹ್ವಯಂ ಕೋಟೀಶಂ ॥
ಲೋಷ್ಟವಿಭೇದನ ಮದು ನಿ ।
ಸ್ಪೃಷ್ಟಂ ಶಂಬಾಕೃತಂ ದ್ವಿಸೀತ್ಯ ಮೆನಿಕ್ಕುಂ ॥ ೭೦ ॥

ಯಜನಾಧ್ಯಯನಂ ದಾನಂ ।
ನಿಜಮಾಗಿರೆ ನೃಪವಣಿಕ್ಕುಲಕ್ಕಂ ಸಲ್ಗುಂ ॥
ದ್ವಿಜನಾಮಂ ಮಿಕ್ಕಾ ತು ।
ರ್ಯಜಾತಿ ತಾಂ ವೃಷ [ಲ ನಂತ್ಯ]ವರ್ಣಂ ಶೂದ್ರಂ ॥ ೭೧ ॥

ಕಂ॥ ಭೃತಿ ವೇತನಂ ಮೂಲ್ಯಂ ಬೆಲೆ ।
ಭೃತಕಂ ವೈತನಿಕ ನಱಿಗೆ ಕರ್ಮಕರಂ ಪಿರ್ರ ॥
ಕೃತಂ ನಪಶದಂ ಪೃಥಗ್ಜನ ।
ನಿತರಂ ಪಾಮರ ನೆನಿಪ್ಪ ನಕ್ಕುಂ ಜಾಲ್ಮಂ ॥ ೩೦ ॥

ಪ್ರಕೃತಿಜನಂ ಶಿಲ್ಪಿಗಳೆಱಿ ।
ಗೆ ಕಾರುಗಳೆ ತಾವೆನಿಪ್ಪರನ್ತವಱಿಒಳ್ ವ ॥
ರ್ಧಕಿ ದಲ್ ರಥಕಾರಂ ತ್ವ ।
ಷ್ಟೃಲ ಕಾಷ್ಟತಟ್ ತಕ್ಷಕಾಭಿಧಾನ ಮೆನಿಕ್ಕುಂ ॥ ೩೩ ॥

ಮಾಳಾಕಾರಂ (ಮಾಲಿ) ಕು ।
ಲಾಲಾಖ್ಯಂ ಚಕ್ರಿ ಕುಂಭಕಾರ ನವಂ ಶೈ ॥
ಲಾಲಿ ನಟಂ ತಾಂ ಭರತಂ ।
ಶೈಲೂಷಾಹ್ವಂ ಕೃಶಾಶ್ವಿ ಜಾಯಾಜೀವಂ ॥ ೩೪ ॥

ಪ್ರಕೃತಾನುಭಾವನತನ ।
ರ್ತಕ ಲಾಸಿಕ ಯೆಂಬಳಕ್ಕು ಮೋದಿಸುವ ನಟಂ ॥
ಪ್ರಕಟಂ ಸ್ತ್ರೀವೇಷಧರಂ ।
ಭ್ರಕುಂಸ ನೆನೆಯುಂ ಭ್ರುಕುಂಸ ನೆನೆಯುಂ ನೆಗಱ್ಗುಂ ॥ ೩೫ ॥

ಜಾಲಿಕನೆನೆ ಕಾಪಟಿಕಂ ।
ನೀಲೀರಾಗಂ ದೃಢಾನುರಾಗಂ ಲಜ್ಜಾ ॥
ಶೀಲಂ ಲಜ್ಜಾಲು ಕರಂ ।
ಶಾಲೀನಂ ಶಾರದಾಖ್ಯ ನಕ್ಕು ಮಧೃಷ್ಟಂ ॥ ೩೬ ॥

ವೈತಾಳಿಕನಕ್ಕುಂ ಬಾ ।
ಭಾತಿಕ ನನ್ವಾಂಯಶಂಸಿ ಮಾಗಧನಾತಂ ॥
ಸೂತಂ ವೆಂದಕ್ಕನಧಿಕಗು ।
ಜಾತಿಶೆರುಸ್ತುತಿವಿಶಾರದಂ ವಂದಿ ಯುಮಂ ॥ ೩೭ ॥

ಕಂ॥ ವೈತಾಳಿಕ ಪ್ರಬೋಧಕ ।
ಸೂತ ಸ್ತುತಿಪಾಠಕಾಖ್ಯೆ ವಂದಿಯೊಳಕ್ಕುಂ ॥
ವ್ಯಾತಕ್ಕರ ನಕ್ಷಧೂರ್ತಂ ।
ದ್ಯೂತ ಮದಕ್ಷವತಿ ಲಗ್ನಕಂ ಸಹಿತಾಖ್ಯಂ ॥ ೭೮ ॥

ವೈಕಟಿಕಂ ಮಣಿಕಾರಂ ।
ವ್ಯೋಕಾರಂ ಲೋಹಕಾರ ನಸಿಧಾವುಕನಂ ॥
ತಾ ಕಮ್ಮಱ ನಸಗಂ್ತಾಂ ।
ಸ್ವೀಕೃತನಿರ್ನೇಜಕಾಭಿಧಾನಂ ರಜಕಂ ॥ ೭೯ ॥

ತ್ರಿಪದಿ॥ ಐರಣಿಕಂ ಕುರುಕುರುಕಾರಂ ತದಧ್ಯಕ್ಷಂ ।
ಭೌರಿಕ ನೆನಿಕುಂ ಕುಶೀಲವರ್ ।
ಚಾರಣ ರಪ್ಪರ್ ಪೆಸರಿಂದಂ ॥ ೮೦ ॥

ಕಂ॥ ಪರಿಮೋಷಿ ದಸ್ಯು ಪಾಟ ।
ಚ್ಚರ ನೈಕಾಗಾರಿಕಂ ಪರಾಸ್ಕಂದಿ ಖಳಂ ॥
ಪರಿಪಂಥಿ ಚೋರಕಂ ತ ।
ಸ್ಕರಂ ಮಲಿಮ್ಲುಚ ನೆನಿಪ್ಪನಕ್ಕುಂ ಸ್ತೇನಂ ॥ ೮೧ ॥

ಮತಿಗೆಡಿಸಿ ಛಿದ್ರಪಾತಂ ।
ಪ್ರತಾರಕಂ ಪಶ್ಯತೋಹರಂ ಕಡುಗಳ್ಳಂ ॥
ಪ್ರತಿರೋಧಕ * ನಾರಟಗೊ ।
ಳ್ವೆ ತಕ್ಕಿನವನಱೆಗೆ ಕಳವೆ ಚೌರ್ಯಂ ಸ್ತೇಯಂ ॥ ೮೨ ॥

ವೈವಧಿಕರ ಪರಿಕಂತಂ ? ।
ಪಾವಡಿ ಗಹಿತುಂಡಿಕಾಖ್ಯ ನಕ್ಕುಂ ರಂಗಾ ॥
ಜೀವಂ ಚಿತ್ರಕರ ನಜಾ ।
ಜೀವ[ನ]ನಜಪಾಳಿ ಲೇಪಕಂ ಪಳೆಗಂಡಂ ॥ ೮೩ ॥

* ನಾಱಡಿಗೊಳ್ವೆ (ಎಂದಿರಬಹುದು).

ಕಂ॥ ಕ್ಷುರಿ*ಯೆಂಡಿ ನಾಪಿತಂ ಧೀ ।
ವರ ಜಾಳಿಕ ದಾಶನಾಮ ಮಿಾಂಗುಲಿಗಂ ಶಾ ॥
ಬರ [ಚಾಪ] ಶರಕರಂ ವಾ ।
ಗುರಿಕಾಖ್ಯಂ ಮೃಗಯು ಲುಬ್ಧಕಂ ಬಿಯದ ನವಂ ॥ ೮೪ ॥

†ಕೌಟಿಕ ನಾಮಿಮಷಮಂ ಮಿಗೆ ।
ಪಾಟಿಸಿ ಮಾಱುತ್ತಮಿರ್ಪ್ಪ ವೈತಂಸಿಕ ನಾ ॥
ಖೇಟನ ಮೃಗವ್ಯ ಮೃಗಯೋ ।
ಚ್ಚಾಟನ ಪಾಪರ್ದ್ಧಿರತೆ ನವಂ ಬೇಂಟೆಯುವಂ ॥ ೮೫ ॥

ಶೌಂಡಿಕನೆನೆ ಕಳ್ಳ (ವಳೆಂ) ।
ಚಂಡೆಂ ನಾಗಾರಿಯೆಂದ [ಡೆ] ಂಡೆಯುವಂ ವೈ ॥
ತಂಡಿಕನಱಿ ಕುಹಕತೆಯಿಂ ।
ಕೊಂಡಾಡುವ ನಿಂದ್ರಜಾಲಿಕಂ ತಾನಕ್ಕುಂ ॥ ೮೬ ॥

ತಂತುಗುಣಂ ಸೂತ್ರಂ ಮ ।
ತ್ತಂತೆ ಕುವಿಂದಾಖ್ಯೆ ತಂತುವಾಯಂಗಕ್ಕುಂ ॥
ಅಂತಾವಸಾಯಿ ಚಂಡಾ ।
ಳಂ ತಾಂ ಹೊಲೆಯಂ ಜನಂಗಮಂ ಮಾತಂಗಂ ॥ ೮೭ ॥

ವನಚರ ಕಿರಾತ ಧಾನು ।
ಷ್ಕ ನಿಷಾದ ಪುಲಿಂದ ಶಬರ ಭಿಲ್ಲಾಖ್ಯಂ ಬೇ ॥
ಡನವಂ ತಾನಕ್ಕುಂ ಶ್ವಪ ।
ಚ ನಿಷ್ಟಮಾಳಾವಿಭೇದಕಂ ಮ್ಲೇಚ್ಛಕುಳಂ ॥ ೮೮ ॥

ಇಂತು

— ಮನುಷ್ಯಜಾತಿವರ್ಗಂ —



* ಕ್ಷುರಮರ್ದಿ (ಹಲಾಯು). † ಕೌಳಿಕ (ಹಲಾಯು).

# ಶ್ರೀ ವೀತರಾಗಾಯನಮಃ.

## ನಮಃಸಿದ್ಧೇಭ್ಯಃ



೧ ಅವಿಭಿನ್ನಾರ್ಥಕಾಂಡಂ. ೧-೧ ದೇಹಾವಯವಾದಿವರ್ಗಂ.

ಕಂ॥ ತನು ಗಾತ್ರಂ ವಿಗ್ರಹ ಮುಪ ।
ಘನಂ ಶರೀರಂ ಕಳೇಬರಂ ಕಾಯಂ ಸಂ ॥
ಹನನಂ ದೇಹಂ ವಪು ಯೆಂ ।
ದಿನಿತುಂ ಭಾವಿಸುವೊಡೆಂಗಪರ್ಯಾಯಂಗಳ್ ॥ ೧ ॥

ಚರಣಂ ಕ್ರಮ ಮಂಘ್ರಿ ಪದಂ ।
ಬೆರಲಂಗುಳಿ ಪಾದತಳ ಮಡಿ ಯೆನೆ ಪಡೆಗುಂ ॥
ಪರಭಾಗಂ ಪಾರ್ಷ್ಣಿ ಮಡಂ ।
ಪರಡುಗ[ಳ್]ವೆ ಗುಲ್ಫಘುಂಟಿಕಾನಾಮಂಗಳ್ ॥ ೨ ॥

ಪ್ರಸೃತಾಖ್ಯೆ ಜಂಘೆ ತೊಡೆ ಯೂ ।
ರು ಸಕ್ಥಿ ಮೊಳಕಾಲ್ಗಳಂತ ವಷ್ಠೀವಂ ಜಾ ॥
ನು ಸಮಾಹ್ವಂಗಳವೆನಿಕುಂ ।
ಪೆಸರಿಂ ಪಾದಾಗ್ರ ವಂತದಕ್ಕುಂ ಪ್ರಪದಂ ॥ ೩ ॥

ಸ್ರ॥ ವೃ॥ ಆರೋಹಂ ಶ್ರೋಣಿ ಕಾಂಚೀಪದ ಜಘನ ಕಟೀ ಸಂಜ್ಞೆಯಕ್ಕುಂ
ನಿತಂಬ ।
ಕ್ಕೂರುಶ್ರೋಣಿ[ದ್ವಯಾ]ಸಂಧಿಗಳೆರಡುಮವುಂ ವಂಕ್ಷಣಂ ಪಾಯು
[ಗೂಢ] ॥
ದ್ವಾರಾಪಾನಂ ಗುದಂ ಮೇಹನ ಮಱಿಗದೆ ದಲ್ ಶೇಫ ಶಿಶ್ನಾಹ್ವ
ಯಂ ಸಂ ।
ಸಾರಾಖ್ಯಂ ತಾಂ ವರಾಂಗಂ ಸ್ಮರಸದನ ಮುಪಸ್ಥಂ ಭಗಂ ಯೋನಿ
ನಾಮಂ ॥ ೪ ॥

ಕಂ॥ ಕಟಿಶೀರ್ಷಂ ಸ್ಫಿಕ್ ಪ್ರೋಥಂ ।
ಕಟಿಸ್ಥಿತಂ ಕೂಪಕಂ ಕುಕುಂದರ ಮೆರಡುಂ ॥
ಘಟಿತತ್ರ್ಯಸ್ಥಿಪದಂ ತ್ರಿಂ ।
ಕಟಾಹ್ವಯಂ ವೃಷಣ ಮಂತರಂಗಾಂಗ [ಮದಂ] ॥ ೫ ॥

ಬಸಿಱುದರಂ ಜಠರಂ ಕು ।
ಕ್ಷಿಸಮಾಹ್ವಂ ನಾಭಿ ಪೊಕ್ಕುೞಿಂದಱ್ವುದು ಕಿ ॥
ಬ್ಬಸಿಱದು ವಸ್ತಿ ಕೆಲಂ ಪಾ ।
ರ್ಶ್ವಸಂಜ್ಞಕಂ ಪಶ್ಚಿಮಾಂಗಭಾಗಂ [ಪೃಷ್ಠಂ] ॥ ೬ ॥

ಶಿಖರಿಣಿ॥ ಉರಂ ವತ್ಸಂ ವಕ್ಷಂ ಹೃದಯ ಮೆದೆ ಮುಯ್ವಂಸಯುಗಳಂ ।
ಕೊರಲ್ ಕಂಠ ಗ್ರೀವಾ ಗಳ ನಿಗರಳಂ ಕಂಧರವೆನಲ್ ॥
ಕರಂ ದೋ ಬಾರ್ಹಾಹ್ವಾಖ್ಯಂ ಭುಜೆ ಭುಜ ಮವೇಕಾರ್ಥವಚನಂ ।
ಕರಾಗ್ರಂ ತಾಂ ಹಸ್ತಂ ಶಯಸಮಭಿದಂ ಪಾಣಿ ಕರಮುಂ ॥ ೭ ॥

ಕಂ॥ ಕಕ್ಷೆ ಭುಜಮೂಲ ಮಂತದು ।
ವಕ್ಷೋಂಸದ್ವಿತಯಸಂಧಿ ಜತ್ರು ವೆನಿಕ್ಕುಂ ॥
ವಕ್ಷೋಜ ಕುಚ ಸ್ತನ ಮುಪ ।
ಲಕ್ಷಿಸೆ ಮೊಲೆ ಮೊಲೆಯ ಕೊಟ್ಟು ಚೂಚುಕ ಮಕ್ಕುಂ ॥ ೮ ॥

ಮಣಿಬಂಧನದಿಂದಂ ಕಿಱು ।
ಕುಣಿಕೆವರಂ ಕರಭ ಮೆಂಬುದಕ್ಕುಂ ಪೊಱಿಕೆಯ್ ॥
ಮಣಿಕಟ್ಟಿನ ಕೂರ್ಪರದೆಡೆ ।
ಯೊಳ್ ಮುಂಗೆಯ್ ತಾಂ ಪ್ರಕೋಷ್ಠ ನಾಮಮದಕ್ಕುಂ ॥ ೯ ॥

ಕರಶಾಖೆಗಳೆಂಗುಳಿಗಳ್ ।
ಕರಜಂ ನಖರಂ ನಖಂ ಪುನರ್ಭವ ಮುಗುರ್ಗಳ್ ॥
ಕರಯುಗಸಂಪುಟ ಮಂಜಲಿ ।
ಕರಂ ನಿಕುಂಚಿತ ನಿಜಾಂಗುಳೀಕಂ ಪ್ರಸೃತಂ ॥ ೧೦ ॥

ಕಂ॥ ಅಂಗುಷ್ಠಂ ತರ್ಜನಿ ಮ ।
ಧ್ಯಾಂಗುಳಿ ಪೆಸರಿಲಿ ಕನಿಷ್ಠೆಯೆಂವಕ್ಕುಂ ನಾ ॥
ಮಂಗಳ್ ಬೆರಳ್ಗೆ ತಱಿದೆ ತ ।
ದಂಗುಳಿಗಳೊಳಾದ ಸಂಧಿ ಪರ್ವ ಮೆನಿಕ್ಕುಂ ॥ ೧೧ ।

ವಿಸ್ತೃತಾಂಗುಳಿ ಪಾಣಿ ತಳೆಂ ।
ಪೆಸರಿಂ ಪ್ರತಳಂ ಚಪೇಟವೆನೆ ಪಡೆಗುಂ ಸಂ ॥
ಧಿಸಿದಂಗುಳಿ ಯೆಂಬುದು ಮು ।
ಷ್ಟಿ ಸಪ್ರಕೋಷ್ಠಂ ಕರಾಗ್ರ ವಂತೆಮ ಹಸ್ತಂ ॥ ೧೨ ॥

ಅಂಗುಷ್ಠಕ್ಕೆ ಕನಿಷ್ಠಿಕೆ ।
ಯಿಂ ಗೋಕರ್ಣಂ (ವಿ) ತಸ್ತಿ ಪೆಸರಿಲಿಯಿಂ ಮ ॥
ಧ್ಯಾಂಗುಳಿಯಿಂದಂ ತಾಳಾ ।
ಖ್ಯಂ ಗೇಣ್ ತರ್ಜನಿಯಿ ನಳೆಯೆ ತಾಂ ಪ್ರಾದೇಶಂ ॥ ೧೩ ॥

ವಂಶಸ್ಥಂ॥ ಅರತ್ನಿನಾಮಂ ಸಕನಿಷ್ಠಕಂ ಮೊೞಂ ।
ಕರಾಗ್ರಬದ್ಧಾಂಜಳಿ ರತ್ನಿಸಂಜ್ಞಿಕಂ ॥
ಸಿರಕ್ಕೆ ಮೇಲೆತ್ತಿದ ಬಾಹು ಪೌರುಷಂ ।
ಕರದ್ವಯಂ ವ್ಯಾಮ ಮತಿಪ್ರಸಾರಿತಂ ॥ ೧೪ ॥

ಅಕ್ಕರಂ॥ ವದನ ಮಾನನ ಮಾಸ್ಯಂ ಮುಖಂ ತುಂಡಂ ಲಪನಂ ವಕ್ತ್ರಂ ಮೊಗಕ್ಕೆ
ನಾಮಂ ದನ್ತಂ ।
ರದಂ ದಶನಂ ದ್ವಿಜಂ ನಾಲಗೆ ರಸನೆ ರಸಜ್ಞೆ ಜಿಹ್ವೆ ಕದಪು ಕೆಲ್ಲಂ
ಕಪೋಳಂ ಗಂಡಸ್ಥಳಂ ದಂತ ॥
ಚ್ಛದಾಹ್ವಯಾಧರ ವೋಷ್ಠ[ದಂತವಾಸಂ] ತದುಪಾಂತಮಂ ।
ತದು ಸೃಕ್ಕಾಭಿಧಾನ ಮಧರದಧಸ್ಸ್ಥಳಂ ಚಿಬುಕ[ಮೆನಿಕುಂ]॥ ೧೫ ॥

ಕಂ॥ ಈಕ್ಷಣ ನಯನ ವಿಲೋಚನ ।
ಚಕ್ಷುರ್ನೇತ್ರಾಂಬಕಾಕ್ಷಿಗಳ್ ದೃಙ್ನವಂ ॥
ವೀಕ್ಷಣಮಕ್ಕುಂ ದೃಷ್ಟಿ ಕ ।
ಟಾಕ್ಷಂ ಕೇಕರ ಮಪಾಂಗ ಮನಿಕಂ ಕಡೆಗಣ್ ॥ ೧೬ ॥

ಜನಿತಾಶ್ರುಜಲಂ ಬಾಷ್ಪಂ ।
ಕನೀನಿಕಾನಾಮ ಮಕ್ಷಿತಾರಕ ಮಕ್ಕುಂ ॥
ಹನು ತಾಂ ಗಂಡಾಂತಂ ಮೂ ।
ಗು ನಾಸಿಕಾ ಘ್ರಾಣ ಸಿಂಘನೀ ಘೋಣಾಖ್ಯಂ ॥ ೧೭ ॥

ಶ್ರವಣಂ ಕರ್ಣಂ ಶ್ರೋತ್ರಂ ।
ಕಿವಿ ನಿಟಿಳಂ ಭಾಳ ಮಳಿಕ ಮಱುಗೆ ಲಲಾಟಂ ॥
ಅವಟು ಕೃಕಾಟಿಕೆ ಘಾಟಾಹ್ವ ।
ಯುವದಕ್ಕುಂ ಪುರ್ಬುವಲ್ಲಿ ತಾಂ ಭ್ರೂನಾಮಂ ॥ ೧೮ ॥

ಮನ್ತೋತ್ತಮಾಂಗ ಶೀರ್ಷಕ ।
ಮಸ್ತಕ ಮೂರ್ಧಾ[ಭಿಧೇಯಮುಂ] ಮೌಳಿ ಶಿರಂ ॥
ಹಸ್ತಂ ಪಾಶಂ ಪಕ್ಷಂ ।
ಶಸ್ತಕಚಪ್ರಚಯವಾಚಕಂ ತತ್ಪರದೊಳ್ ॥ ೧೯ ॥

ಮ॥ ತಲೆರೋಮಂ ಚಿಕುರಂ ಕಚಂ ಶಿರಸಿಜಂ ಕೇಶಂ ಶಿರೋಜಂ ನವಿರ್ ।
ಪಲಿತಂ ಪಾಂಡರ ವಾದವಾಳಮು(ಮ)ದಂತಾ ಕುಂಚಿತಂ ಕುಂತಳಂ॥
ಅಳಕಂಗಳ್ ಕುರುಳೋಲಿಗಳ್ ಭ್ರಮಕರಂ ಬಾಳಸ್ಥಿತಂ ನೀಳ್ವೆ ಬೈ ।
ತಲೆ ಸೀಮಂತನಮಾಹ್ವಯಂ ಕಬರಿ ಧಮ್ಮಿಲ್ಲಂ ಕಚೋದ್ಬಂಧನಂ ॥

ಕಂ॥ ಬಾಳಕರ ಶಿಖೆ ಶಿಖಂಡಂ ।
ಚೂಳಾಖ್ಯಂ ಕಾಕಪಕ್ಷ ಮೆಂಬುದದಕ್ಕುಂ ॥
ಸ್ಥೂಳಾವನದ್ಧ ವೇಣೀ ।
ಜಾಳಂ ಮುನಿಜನದ ಜಟಿ ಜಟಾಹ್ವಯ ಮಕ್ಕುಂ ॥ ೨೧ ॥

ಕಂ॥ ರೋಮಮಂ ತನೂರುಹಂ ಮುಖ ।
ರೋಮಮಂ ಶ್ಮಶ್ರು ಕೂರ್ಚಕಂ ಹನುರೋಮಮಂ ॥
ರೋಮಮಾವಳಿ ಮಧ್ಯೋದ್ಭವ ।
ರೋಮಮಂ ತಾನಱಿಗೆ ನಯನರೋಮಮಂ ಪಕ್ಷ್ಮಂ ॥ ೨೨ ॥

ಪರಿವಿಡಿಯಿಂದಂ ತ್ವಕ್ಚ ।
ಕ್ಷುಂ ರಸನೆ ಕಿವಿ ಮೂಗಿ ವೈದು ಮಱುಗೆ ಹೃಷೀಕಂ ॥
ಕರಣಂ ಖಮಿಂದ್ರಿಯ ಸ್ಪ ।
ರ್ಶ ರೂಪ ರಸ ಗಂಧ ಶಬ್ದ ವಿಷಯಪ್ರವರಂ ॥ ೨೩ ॥

ಐಂದ್ರಿಯಕಂ ಪ್ರತ್ಯಕ್ಷಮ ।
ತೀಂದ್ರಿಯಮಪ್ಪುದು ಪರೋಕ್ಷ ಮಕ್ಷಾದ್ಯಂ ಬು ॥
ದ್ಧೀಂದ್ರಿಯ ಮಂತೆಯ್ದುಂ ಕ ।
ರ್ಮೇಂದ್ರಿಯ ವಾ(ಕ್ಪಾದ) ಪಾಣಿಪಾಯೂಪಸ್ಥಂ ॥ ೨೪ ॥

ಮನ ಮಾಶಯ ಮಂತಃಕರ ।
ಣ ನಾಮಮದೆ ಚಿತ್ತಮಂತೆ ಚೇತಂ ಸ್ವಾಂತಂ ॥
ಮನದಿಡೆವಱಿಯೊಳ್ ವರ್ತಿಕಂ ।
ಮನಿತಿಂದ್ರಿಯ ಗಣಮುಮದಱಿಕೊಳಧಿಕೃತ ನಾತ್ಮಂ ॥ ೨೫ ॥

ವಾಯು ಸಮೀರಂ ಪಿತ್ತಂ ।
ಮಾಯು ಕಫಂ ಶ್ಲೇಷ್ಮ ಮೆಂದೆನಿಕ್ಕುಂ ತತ್ತ್ರ ॥
ಯ್ಯಾಯತ್ತಂ ಬಹಿರಾತ್ಮಂ ।
ಕಾಯಂ ಪ್ರತ್ಯುಪ್ತಸಪ್ತಧಾತು ನಿಬದ್ಧಂ ॥ ೨೬ ॥

ಕ್ಷತಜಂ ರುಧಿರ ಮಸೃಕ್ಲೋ ।
ಹಿತ ಮಸ್ರಂ ಶೋಣಿತಾಖ್ಯಮೆಂಬುದು ರಕ್ತಂ ॥
ಕ್ಷತ ಮೀರ್ಮಂ ವ್ರಣ ಮರು ತ ।
ದ್ಗತಮಾದುದು ಪೊಲಸುನಾರ್ಪ ಗಂಧಂ ವಿಸ್ರಂ ॥ ೨೭ ॥

ಕಂ॥ ತ್ವಚ ಮಜಿನಾಸೃಗ್ಧರೆ ಕೃ ।
ತ್ತಿ ಚರ್ಮ ಮೆನೆ ತೋ(ಲ್ತ್ವಗಾ)ಹ್ವಯಂ ಸ್ನಾಯು ಸಿರಾ ॥
ಪ್ರಚಯಂ ವಸೆ ಮೇದಂ ವಪೆ ।
ವಿಚಾರಿಸಲ್ ಕರುಳದಾಂತ್ರಮಾಲೆ ಪುರೀತಂ ॥ ೨೮ ॥

ಎಲು ವಸ್ಥಿ ಕೀಕಸಂ ಮೆ ।
ಯ್ಯೆಲು ಪದು ಕಂಕಾಳ ಸಂಜ್ಞಕಂ (ದಲ್) ಕೆಯ್ಯಾ ॥
ಲೆಲುವುಗಳವೆ ನಳಕಂ ತಲೆ ।
ಯೆಲುವಱಿಗೆ ಕರೋಟಿ [ಶಕಲಮು]ಕ್ಕೆ ಕಪಾಲಂ ॥ ೨೯ ॥

ಪಲಲಂ ಪಿಶಿತಂ ಕ್ರವ್ಯಂ ।
ಪಲ ಮಾಮಿಷ ಪಡೆಗು ಜಾಂಗಲಾಖ್ಯಂ ಮಾಂಸಂ ॥
ತಿಳಕಾಭಿಖ್ಯಂ ಕ್ಲೋಮಂ ।
ಬಳೆ ಮಿಂದ್ರಿಯ ಮಂತೆ ಧಾತು ರೇತಂ ಶುಕ್ಲಂ ॥ ೩೦ ॥

ಶಮಲಂ ವರ್ಚಸ್ಕಂ ವ ।
ರ್ಚ ಮಮೇಧ್ಯ ಮವಸ್ಕರಂ ಶಕೃದ್ಗೂಥಂ ವಿ ॥
ಷ್ಠೆ ಮಳಂ ಪುರೀಷ ಮುಚ್ಚಾ ।
ರ ಮುದಕ್ಕುಂ ಪ್ರಸ್ರವಾಭಿಧಾನಂ ಮೂತ್ರಂ ॥ ೩೧ ॥

ರೋಗಾತಂ (ಕಂ) ವ್ಯಾಧಿ ರು ।
ಜಾ ಗದ ಮುಪತಾಪನಾಮ ಮಾಮಯಕಕ್ಕುಂ ॥
ರೋಗಾರ್ತ ನಾತುರಂ ತಾಂ ।
ರೋಗವಿನಿರ್ಮುಕ್ತ ನಪ್ಪನವನುಲ್ಲಾಘಂ ॥ ೩೨ ॥

ಅರುಜಂ ವಾರ್ತಂ ಕಲ್ಯಂ ।
ನಿರಾಮಯಂ ಪಟು ವೆನಿಪ್ಪ ನಾರೋಗ್ಯಮಯಂ ॥
ಜ್ವರ ಕುಷ್ಠ ಭಗಂಧರ ಮೇ ।
ಹ ರಾಜಯಕ್ಷ್ಮಾದಿ ಭೇದಭಿನ್ನಂ ರೋಗಂ ॥ ೩೩ ॥

ಕಂ॥ ದವಥು ಪರೀತಾಪಂ ಶೋ ।
ಥವಿಕಾರಂ ಶ್ವಯಥು ವಮಥು ವಮನಂ [ಕಾಸಂ] ॥
ಕ್ಷವಥು ಪದವಸಾದಂ ಕ್ಲಮ ।
ಥು ವೇಪನಂ ತಾನದಱಿಗೆ ವೇಪಥು ವೆನಿಕುಂ ॥ ೩೪ ॥

ಆನಾಹಮದು ನಿಬಂಧಂ ।
ಪೀನಸ ಮೆನೆ ನೆಗಡಿ ತಾಂ ಪ್ರತಿಶ್ಯಾಯಂ ಕ ॥
ಚ್ಛೂನಾಮ ಮಱಿಗೆ ಪಾಮಂ ।
ಸೀನ ಕ್ಕುಂ ಕ್ಷುತ್ಕ್ಷವಂ ಕಿಳಾಸಂ ಸಿಧ್ಮಂ ॥ ೩೫ ॥

ಮಂಡಲ ಮಕ್ಕುಂ ಕುಷ್ಠಂ ।
ಗಂಡ ಸ್ಫೋಟಕ ಸಮಾಹ್ವಯಂ ತಾಂ ಪಿಟಕಂ ॥
ಪಾಂಡುರ ಕುಷ್ಠಂ ಶ್ವಿತ್ರಂ ।
ಕಂಡೂ ಕಂಡೂತಿ ಖರ್ಜ್ಜುಗಳ್ ತಾನಕ್ಕುಂ ॥ ೩೬ ॥

ವಾತವ್ಯಾಧಿಪರೀತಂ ।
ವಾತಕಿ ವಿಕ್ಲಿನ್ನಚಕ್ಷು ಪಿಲ್ಲಂ ಶ್ಲೇಷ್ಮೋ ॥
ಪೇತಂ ಶ್ಲೇಷ್ಮಳ ನರ್ಶಾ ।
ಸ್ಸ್ವೀತ ನೆನಿಪ್ಪಾತ ನರ್ಶಸಂ ತಾ ನಕ್ಕುಂ ॥ ೩೭ ॥

ಖಳತಿ ಶಿಪಿವಿಷ್ಟ ನವನುದ ।
ರಿಳ ನಕ್ಕುಂ ತುಂದಿಳಂ ಕಿಲಾಸಯುತಂ ಸಿ ॥
ಧ್ಮಳನ [ಕ್ಕು]ಂ ಖುಗುಡಂ ತುಂ ।
ದಿಳ ನುಪಚಿತ ದದ್ರುರೋಗಿ ದದ್ರುಣ ನಾತಂ ॥ ೩೮ ॥

ವಿಕಲಾಂಗಂ ಪೋಗಂಡಂ ।
ಕುಕರಂ ಕುಣಿ ಪಂಗು ಪಱಿವ ನೆನಿಕುಂ ಖಂಜಂ ॥
ವಿಕೃತಾಂಘ್ರಿಯುತಂ ನತನಾ ।
ಸಿಕ ನವಟೀಟಂ ವ್ಯಪೇತನಾಸಂ ವಿಗ್ರಂ ॥ ೩೯ ॥

1364—10

ಮ॥ಸ್ರ॥ಗಡುಳಂ ತಾಂ ಕುಬ್ಜ ನಲ್ಪಸ್ವತನುಪರಿಗತಂ ಪೃಶ್ನಿ [ಯಾತಂ] ಕಿರಾತಂ ।
ಜಡನಕ್ಕುಂ ಮೂಕ ನೇಡಂ ಬಧಿರನೆನಿಪವಂ ವಾಮನಂ ಖರ್ವಶಾಖಂ ॥
ಎಡಮೂಕಂ ವಾಕ್ಛ್ರುತಿವ್ಯಾಪೃತಿವಿ [ರ]ಹಿತ ನಂಧಂ ಸಮಸ್ತಾಕ್ಷಿಹೀನಂ ।
ನುಡಿಯಲ್ಕೆಳಲ್ಕಣಂ ಪೊಂಗಱಿಯದ ಕುಳಿಯಂ ಪೇಱ್ವುದಾನೇಕಮೂಡಂ॥

ಕಂ॥ ಬಳವಂತಂ ಮಾಂಸಳ [ನಿ ।
ರ್ಬಳ] ನೆನೆ ತಾಂ ಕ್ಷೀಣಮಾಂಸ......॥
......ನಧಿಕಲೋಮ ।
...ನುಪಜಾತಕಚ್ಛು ಪಾಮನ ನಕ್ಕುಂ ॥ ೪೧ ॥

ದೋಷಂ ಪ್ರತಿಕಾರಕ್ರಿಯೆ ।
ದೋಷಜ್ಞಂ ತಂತ್ರವೇದಿ ಬೆಜ್ಜಂ ವೈದ್ಯಂ ॥
ಭೇಷಜ ಮೌಷಧ ಮಗದಂ ।
ಭೇಷಜ್ಯಂ ಜಾಯು ತಂ [ತ್ರ] ಮನ್ತ್ಯೋಕಾರ್ಥಂ ॥ ೪೨ ॥

ಇಂತು

—ದೇಹಾವಯವಾದಿವರ್ಗಂ—



# ಶ್ರೀ ವೀತರಾಗಾಯ ನಮಃ.

—ನಮಸ್ಸಿದ್ಧೇಭ್ಯಃ—



ಕಂ॥ ಪ್ರತಿಕರ್ಮಂ ನೇಪಥ್ಯಂ ।
ಪ್ರತಿಸಂಸ್ಕಾರಂ ಪ್ರಸಾಧನಂ ವೇಷ ಮಲಂ ॥
ಕೃತಿ ಮಂಡನಂ ವಿಭೂಷಾ ।
ಪ್ರತಾನ ಮಾಭರಣ ಮೆಂಬುವವು ತೊಡವಕ್ಕುಂ ॥ ೧ ॥

ಮಕುಟಂ ಕೋಟೀರಂ ಮೌ ।
ಳಿ ಕಿರೀಟಂ ತಾನೆನಿಕ್ಕು ಮುಷ್ಣೀಷಂ ಕ॥
ರ್ಣಿಕೆ ಕರ್ಣವೇಷ್ಟನಂ ಕ ।
ರ್ಣಕುಂಡಳಂ ತಾಳೆಪತ್ರಕಂ ತಾಟಂಕಂ ॥ ೨ ॥

ಗ್ರೀವಾಳಂಕೃತಿ ಯೆನಿಕುಂ ।
ಗ್ರೈವೇಯಕ ಮಲಘುಮೌಕ್ತಿಕಾವಳಿ ಹಾರಂ ॥
ದೇವಚ್ಛಂದಂ ಯಷ್ಟಿಶ ।
ತಾವಚ್ಛಿನ್ನಂ ತದರ್ಧ ಮದು ಮಾಣವಕಂ ॥ ೩ ॥

ಏಕಾವಳಿ ಸರಿಗೆ ಸುವ ।
ರ್ಣಾಕಳಿತಂ ಲಂಬಣಂ ಲಲಂತಿಕೆ ಮುಕ್ತಾ ॥
ನೀಕಂ ತ್ರಿ [ನವಯುತಂ ತಾ] ।
ರಾಕೃತಿ ನಕ್ಷತ್ರಮಾಲೆ ಯೆನಿಕುಂ ಪೆಸರಿಂ ॥ ೪ ॥

ಅಂಗದ ಮೆನೆ ಕೇಯೂರ ಮ ।
ದುಂಗುರ ಮೂರ್ಮಿಕೆಯು ಮಂಗುಳೀಯಕ ಮಕ್ಕುಂ ॥
ಸಂಗತಲಿಖಿತಾಕ್ಷರಚಯ ।
ಮಂಗುಳಿಮುದ್ರಿಕೆ ಯೆನಿಪ್ಪುದಕ್ಕುಂ ಪೆಸರಿಂ ॥ ೫ ॥

ಕಂ॥ ಕಂಕಣ ಮಾವಾಪಂ ವಳೆ ।
ಯೆಂ ಕಟಕಂ ಪಾರಿಹಾರ್ಯನಾಮಂ ಹಸ್ತ ॥
ಳಂಕೃತಿ ಮೇಖಳೆ ಕಟಿಸೂ ।
ತ್ರಂ ಕಾಂಚೀಕಳಾಪ ಸಪ್ತಕೀ ರಶನಾಖ್ಯಂ ॥ ೬ ॥

ಶಿಂಜಿನಿ ನೂಪುರ ಮಂದುಗೆ ।
ಮಂಜೀರಂ ಹಂಸಕಂ ತುಳಾಕೋಟಿ ಮನೋ ॥
ರಂಜನಮಂಜುಳಮೃದುಕಳ ।
ಸಿಂಜಾನಕ್ಷುದ್ರಘಂಟಿ ಕಿಂಕಿಣಿ ಯೆನಿಕುಂ ॥ ೭ ॥

ಸವನಂ ಮಜ್ಜನ [ಸವ] ಮಾ ।
ಪ್ಲವನಂ ಸ್ನಾನಮು ಮದಂತನರ್ಥಾಂತರ ಮಂ ॥
ಗವಿಲೇಪನಂ ಸಮಾಲಂ ।
ಭ ವಿಷ್ಟಗಂಧಾಧಿವಾಸ ಮದು ಸಂಸ್ಕಾರಂ ॥ ೮ ॥

ತಿಳಕಂ ತಮಾಲಪತ್ರಂ ।
ಲಲಾಟಿಕಾಖ್ಯಂ ಲಲಾಮಕಾದ್ಯಂ ಪತ್ರಂ ॥
ಗುಳಿ ಪತ್ರಲೇಖೆ ಚರ್ಚಾ ।
ನುಲೇಪನಂ ಸ್ಥಾಸಕಂ ಪ್ರಬೋಧನ ಮಕ್ಕುಂ ॥ ೯ ॥

ಘನಸಾರಂ ಪ್ರಾಲೇಯಮಾಂ ।
ಶುನಾಮಕಂ ಹಿಮ ಮೆನಿಪ್ಪುದದು ಕರ್ಪೂರಂ ॥
ಮನಮನೊಲಿಪ್ಪುವ ಕಸ್ತೂ ।
ರಿ ನೆಗಟ್ದಿ ಮೃಗನಾಭಿ ಮೃಗಮದಾಖ್ಯ ಮದಕ್ಕುಂ ॥ ೧೦ ॥

ಅಸೃಗಾಖ್ಯಂ ಕಾಶ್ಮೀರಂ ।
ಘುಸೃಣಂ ಕುಂಕುಮ ಮದೆಂಗೆ (ಜಾಪಕ) ಮಕ್ಕುಂ ॥
ಪೆಸರಿಂದ ಮಗುರು ಕಾಲಾ ।
ನುಸಾರ್ಯಕಂ ಜಾತಿಪತ್ರ ಮದು ಕಾಳೇಯಂ ॥ ೧೧ ॥

ಕಂ॥ ಅಗುರು ಹಿಮಂ ತಕ್ಕೋಲಂ ।
ಮೃಗಮದ ಮಿವು ಕೂಡೆ ಯಕ್ಷಕರ್ದಮ ಮಕ್ಕುಂ ॥
ಮಗಮಗಿಸುವ ಸಜ್ಜರಸಂ ।
ಪೊಗಟಿಸ್ತಿವೆತ್ತಿರ್ದ ಯಕ್ಷಧೂಪ ಮದಕ್ಕುಂ ॥ ೧೦ ॥

ಅಲತಗೆ ಜತು ಲಾಕ್ಷಾದ್ರವ ।
ಮಲಕ್ತಕಂ ಯಾವ ಮಿವು ಸಮಾನಾರ್ಥಂ ಕ ॥
ಜ್ಜಲ ಮಂಜನಾಭಿಧಾನಂ ।
ಮಳಯರುಹಂ * ಚಂದನದ್ರುಮಂ ಶ್ರೀಖಂಡಂ ॥ ೧೩ ॥

ಅವತಂಸೋತ್ತಂಸಾಪೀ ।
ಡವಚನ ಮದು ಶೇಖರಂ ಸ್ರಜಂ ಮಾಲ್ಯಂ ಪು ॥
ಷ್ಪವಿಶೇಷರಚನ ಮುತ್ತಂ ।
ಸ ವತಂಸಂ ಕರ್ಣಪೂರವಾಚಿಯು ಮಕ್ಕುಂ ॥ ೧೪ ॥

ಕ್ಷೋದಂ ಸ್ನಾನೀಯಂ ಕ್ಷಣ ।
ದಾದಿತನುತ್ವಕ್‌ಪ್ರಸಾಧಕದ್ರವ್ಯ ಸಮು ॥
ತ್ಸಾದಿತ ಮುದ್ವರ್ತನ ಮು ।
ತ್ಸಾದಂ ಪಿಷ್ಟಾತಚೂರ್ಣ ಮದು ಪಟವಾಸಂ ॥ ೧೫ ॥

ವಸನಾಂಶುಕ ವಾಸ ಶ್ಚೇ ।
ಲ ಸಿಚಯ ವಸ್ತ್ರಾಂಬರಾಖ್ಯ ಮಾಚ್ಛಾದನ ಮಾ ॥
ವಸನಾಂತ ಮಂಚಳಂವ ।
ರ್ತಿ ಸಿಚಂ ದಶೆ ಯಂಚು ವಸ್ತಿ † ಯಕ್ಕುಂ ಕರೆಗಳ್ ॥ ೧೬ ॥

ನವವಸ್ತ್ರಂ ಪೊಸತದು ನಿ ।
ಷ್ಪ್ರವಾಣಿ ತಾಂತ್ರಿಕ ಮೆನಿಕ್ಕು ಮುದ್ಗಮನೀಯಂ ॥
ಪ್ರವಿಮಳ ಜಲಧೌತಂ ಜೀ ।
ರ್ಣವಾದುದನ್ತದು ಪಟಚ್ಚರಂ ತಾನಕ್ಕುಂ ॥ ೧೭ ॥

---

* ರೋಹಿಣೀದ್ರುಮಂ (ಹಲಾ). † ವಸ್ತರಂ.

ಕಂ॥ ಕ್ರಿಮಿ ಕಾರ್ಪಾಸ ತ್ವಗ್ರೋ ।
ಮ ಮೆಂದು ವಸ್ತ್ರಕ್ಕೆ ಯೋನಿ ನಾಲ್ಕಂತವಱಿೞೊಳ್ ॥
ಕ್ರಿಮಿಜಂ ಕೌಶೇಯಂ ತ್ವ ।
ಕ್ಸಮುದ್ಭವಂ ತಾಮವುಂ ದುಕೂಲ ಮುಮಕ್ಕುಂ ॥ ೧೮ ॥

ತಂತುಚಿತಂ ಕಾರ್ಪಾಸಕ ।
ಮಂತದು ಮೃಗಲೋಮಯೋನಿ ಯದು ರಾಂಕವ ಮ ॥
ತ್ಯಂತಘನಂ ರಲ್ಲಕ ನಾ ।
ಮಾಂತರ ಮೂರ್ಣಾಯು ಮೇಷಕಂಬಳ ಮಕ್ಕುಂ ॥ ೧೯ ॥

ಪರಿಧಾನಂ ನಿವಸನ ಮಂ ।
ತರೀಯ ಮೆಂದಿಂತಿವುಟ್ಟುದರ್ಕ್ಕೆ ಪೆಸರ್ ಪ್ರಾ ॥
ವರಣಂ ಪ್ರಚ್ಛಾದನ ಮು ।
ತ್ತರೀಯ ಮೆನೆ ಮೇಲುದದುವೆ ದಲ್ ಸಂವ್ಯಾನಂ ॥ ೨೦ ॥

ಅಕ್ಕರ॥ ವಾರವಾಣಕಂ ಕಂಚುಕಂ ಕೂರ್ಪಾಸಕಂ ನಿಚೋಲಕ ವ ।
ಧೋರ್ೕರುಕಂ ಚಂಡಾತಕಂ ಬೂರವಟ್ಟಗೆ ಬೃಹತಿಕಾಸಂಜ್ಞಕಂ ॥
ಚೀರಂ ಚೇಳಂ ಕರ್ಪಟಂ ಕಿಱಿಗಿಂ ನಿಣಟಂಕಾಸಿಮ? ।
ನಾರಿಯರ್ಕಳೆ ಜಘನಾಂಶುಕಗ್ರಂಥಿ ಕಣಯ ಮಂತದು ನೀವಿ
ಯೆಂಬುದಕ್ಕುಂ ॥ ೨೧ ॥

ಕಂ॥ ಹೇಳಾ ವಿಳಾಸ ವಿಭ್ರಮ ।
ಳೀಳಾ ಬಿಬ್ಬೋಕ ಲಲಿತ ಹಾವಾಖ್ಯಂಗಳ್ ॥
ಬಾಳೆ ಮಚೆಳೆ ಪೇಶಲದೊಳ್ ।
ಶಾಳದೊಳೆ? ಶೃಂಗಾರಭಾವಸಂಭೂತಂಗಳ್ ॥ ೨೨ ॥

ಗೀತಂ ಗಾನಂ ವಾದ್ಯಮ ।
ದಾತೋದ್ಯಂ ಲಾಸ್ಯ ತಾಂಡವಾಖ್ಯಂ ನೃತ್ಯಂ ॥
ಗೀತಾದಿ ತ್ರಿತಯಂ ಸಂ ।
ಗೀತಂ ತಾಂ ನಾಟ್ಯಭೂಮಿಯಕ್ಕುಂ ರಂಗಂ ॥ ೨೩ ॥

ಕಂ। ವಾದಿತದೊಳ್ ತಾಳದ ಸಮ ।
ನಾದುದು ಲಯ ಮೆಂಬುದೊಂದು ಪೆಸರ್ವಡೆಗುಂ ತ ॥
ದ್ವಾದನ ಮದು ಕೋಣಂ ವರಿ ।
ವಾದಿನಿ ವಲ್ಲಕಿ ವಿಪಂಚಿ ವೀಣಾನಾಮಂ ॥ ೨೪ ॥

ತತ ಮೆಂಬುದು ತಂತ್ರಿಯೊಳ ।
ನ್ವಿತ ಮಾದುದು ಸುಷಿರ ಮೆಂಬುದದು ವಂಶಾದ್ಯಂ ॥
ವಿತತ ಮವನದ್ಧ ಚರ್ಮಾ ।
ವೃತಂ ಘನಂ ಕಾಂಸ್ಯ ವಿನಿತೆ ವಾದ್ಯ ವಿಭೇದಂ ॥ ೨೫ ॥

ಮುರಜಂ ಮೃದಂಗ ಮಾನಕ ।
ಮುರುಪಟಹಂ ಡಿಂಡಿಮಾಭಿಧಾನಂ ಪಟಿಮಂ ॥
ಪಿರಿದಪ್ಪ ಭೇರಿ ದುಂದುಭಿ ।
ಪರಿಶೇಷಂ ವಾದ್ಯ ಮಿವಱಿನೊಳೊಳಕ್ಕೊಂಡಿರ್ಕುಂ ॥ ೨೬ ॥

ನಾದಂ ಶಬ್ದಂ ಧ್ವಾನಂ ।
ಹ್ರಾದಂ ಸ್ವಾನಂ ರವಂ ಸ್ವರಂ ಘೋಷಂ ತ ॥
ದ್ಭೇದಂ ವಚನಂ ವ್ಯಾಹಾ ।
ರೋದೀರಣ ಕಥನ [ಭಾಷ] ಣಾದಿಕ ಮಕ್ಕುಂ ॥ ೨೭ ॥

ಕಳಕಳಮದು ತಾಂ ಕೋಳಾ ।
ಹಳ ನಿನದಂ ಗ್ರಾಮ್ಯವಚನ ಮಶ್ಲೀಲಾಖ್ಯಂ ॥
ಕಳ ಮವ್ಯಕ್ತಂ ಮಧುರಂ ।
ಪ್ರಳಾಪ ಮಕ್ಕುಂ ನಿರರ್ಥಕಂ ವ್ಯಾಹಾರಂ ॥ ೨೮ ॥

ಪರಿದೇವನಂ ವಿಳಾಪಂ ।
ಪರಸ್ಪರಾಲಾಪ ಮಕ್ಕುಮದು ಸಲ್ಲಾಪಂ ॥
ಪರಪರಿವಾದ ಪರವ್ಯಾ ।
ಹರಣ ಮುಪಾಲಂಭ ಮನುಚಿತಾರ್ಥ ಮಬದ್ಧಂ ॥ ೨೯ ॥

ಕಂ॥ ತಾರ ಮುದುಚ್ಚೈರ್ಧ್ವನಿ ಗಂ ।
ಭೀರಂ ಮಂದ್ರಂ (ಸು)ಸಂಗತಂ ಸ್ವಾದು ಮನೋ ॥
ಹಾರಿ ಪರುಷಂ ಕಠೋರ ಮು ।
ಹಾರುತ ಮುಚ್ಚಾವಚಾಖ್ಯ ಮನಿಬದ್ಧವಚಂ ॥ ೩೦ ॥

ತ್ವರಿತೋಚ್ಚಾರಿತ ವಕ್ಕುಂ ।
ನಿರಸ್ತ ವ [ದು] ಲುಪ್ತ ವರ್ಣವಾಕ್ಯಂ ಗ್ರಸ್ತಂ ॥
ದರಮಸ್ಪಷ್ಟಂ ಕಂಠಾಂ ।
ತರ ವಿಕೃತಿ ವಿಭಿನ್ನರುತಿ [ಯೆ]ಕಾಕು ವೆನಿಕ್ಕುಂ ॥ ೩೧ ॥

ಮನಮನೊಳಿಲ್ಲುವ ನುಡಿ ಚಾ ।
ಟು ನಿಯತ' ಮಂಬೂಕೃತಂ ಸನಿಷ್ಠೀವಂ ಪ ॥
ರ್ಯನುಯೋಗಂ ಪ್ರಶ್ನಂ ತಾಂ ।
ಜನವಾದಂ ಕಿಂತದಂತಿ ವಾರ್ತೆ ಯುದಕ್ಕುಂ ॥ ೩೨ ॥

ಋತ ಮೆಂಬುದದು ಸವಿಾಚೀ ।
ನ ತಥ್ಯ ಸತ್ಯೋಕ್ತಿ ಸೂನೃತಂ ಪ್ರಿಯುಸತ್ಯಂ ॥
ವಿತಥ ಮಳೀಕಂ ಮಿಥ್ಯೋ ।
ಕ್ತಿ ತಾಂ ಮೃಷಾವಾದ ಮಧಿಕಮಧುರಂ ಸಾಂತ್ವಂ ॥ ೩೩ ॥

ಅಪವಾದಂ ಕ್ಷೇಪಂ ನಿಂ ।
ದೆ ಪರೀವಾದಂ ವಿಗರ್ಹಣಂ ಕುತ್ಸಾರ್ಥಂ ॥
ಶಪಥಂ ನೂರುಳ್ ಬಯ್ಗುಳ್ ।
ಶಪನ ಮದಾಕ್ರೋಶನಾಮುಮುಂ ತಾನಕ್ಕುಂ ॥ ೩೪ ॥

ನುತಿ ಸಂಸ್ತವನಂ ಸ್ತೋತ್ರಂ ।
ಸ್ತುತಿ ವಂದನ ವಿಾಡೆ ಕೀರ್ತನಂ ಗುಣಕಥನಂ ॥
ಅತಿವಿತತ ಕೀರ್ತಿ ಗುಣಪ ।
ತ್ರ್ಯತತಿ (ಯು) ವರ್ಣ ನೆಸಕಂ ? ಜಿನೋದಾಹರಣಂ ॥ ೩೫ ॥

ಕಂ॥ ಆಖ್ಯಾಹ್ವ ನಾಮ ಗೋತ್ರಾ ।
ಭಿಖ್ಯಾಹ್ವಯ ಸಂಜ್ಞೆಗಳ್ ಸಮಾನಾರ್ಥಂಗಳ್ ॥
ಆಖ್ಯಾಯಿಕೆ ಕಥೆ ಯೆಂಬುವಿ ।
ವಾಖ್ಯಾನ ಮೊಗಂಟೆ ತಾಂ ಪ್ರಹೇಳಿಕೆ ಯಕ್ಕುಂ ॥ ೩೬ ॥

ಕ್ವಣಿತಂ ವೀಣಾಧ್ವನಿ ಭೂ ।
ಷಣರಣಿತಂ ಶಿಂಜಿತಂ ರತಪ್ರಧ್ವಾನಂ ॥
ಮಣಿತಂ ಬೃಂಹಿತ ಮದು ವಾ ।
ರಣಶಬ್ದಿತ ಮಶ್ವವಿರುತಿ ಹೇಷಿತ ಮಕ್ಕುಂ ॥ ೩೭ ॥

ಪರಿಶುಷ್ಕಪರ್ಣವಸ್ತ್ರಾ ।
ದಿರವಂ ಮರ್ಮರ ಮೆನಿಕ್ಕು ಮಸ್ಫುಟಸೂಕ್ಷ್ಮಂ ॥
ಸ್ವರ ಮದು ತಾಂ ಕಾಕಳಿ ವಿವಿ ।
ಧರೂಪಶಸ್ತ್ರಪ್ರಣಾದ ಮದು ಖಣಾಂಗಂ ? ॥ ೩೮ ॥

ಕ್ರೇಂಕಾರಂ ಶಕುನಿಗಳೊಳ್ ।
ಝುಂಕಾರಂ ತುಂಬಿಯೊಳ್ ಧನುರ್ಜ್ಯಾರುತಿಯೊಳ್ ॥
ಟಂಕಾರಂ ವಿರಹೋದ್ಧಂ ।
ಭೇಂಕಾರಂ ವಿರಹ ಯೋಗದೊಳ್ ಹೂಂಕಾರಂ ॥ ೩೯ ॥

ಖಾತ್ಕಾರಂ ಷ್ಠೀವನದೊಳ್ ।
ಫೀತ್ಕಾರ ಮುದಾರಕಲಭಕೋಳಾಹಳದೊಳ್ ॥
ಝಾತ್ಕಾರಂ ಮಾರುತನೊಳ್ ।
ಚೀತ್ಕಾರಂ ಸ್ಯಂದನಂಗಳೊಳ್ ವರ್ತಿಸುಗುಂ ॥ ೪೦ ॥

ಇಂತು

—ಭೊಷಣಾದಿವರ್ಗಂ—



# ಶ್ರೀ ವೀತರಾಗಾಯನಮಃ.

ನಮಸ್ಸಿದ್ಧೇಭ್ಯಃ

೧ ಅವಿಭಿನ್ನಾರ್ಥಕಾಂಡಂ. ೧೪ ಸಮರಾದಿಸಂಪ್ರಕೀರ್ಣವರ್ಗಂ.

ಕಂ॥ ಸಮರಂ ಸಂಗ್ರಾಮಂ ಯು।
ದ್ಧ ಮಾಜಿ ಯಾಯೋಧನಂ ಸಮಾಕಂ ಕದನಂ॥
ಸಮಿತಿ ರಣಂ ಪ್ರಧನಂ ಜ।
ನ್ಯ ಮಾಹವಂ ಸಂಯುಗಂ ಪ್ರಘಾತಂ ಕಲಹಂ ॥ ೧ ॥

ಅಭಿಷೇಣನ ಮಕ್ಕುಂ ರಿಪು।
ಗಭಿಮುಖದೊಳ್ [ಪಡೆವೆರಸಿ ನಡೆವುದದಕ್ಕುಂ]॥
ಸುಭಟಪ್ರಮೋದಕೆರಯು।
ದ್ಧಭೂಮಿ ವೀರಾಸನಂ ಮಹಾ ಪ್ರತಿಭಯದಂ ॥ ೨ ॥

ಸಮರಾಂಗಣದಿಂ ತೊಲಗದ।
ಸಮ[ಯರ್ ಸಂ] ಸಪ್ತಕರ್ ಬಲಂಗಳ್ ತಾಮು॥
ಕ್ರಮದಿಂ ತಳ್ತಿಱಿವುದು [ತಾಂ]।
ತುಮುಳ ರಣಂ ಬಾಹುಯುದ್ಧ ಮಾರಣಯುದ್ಧಂ ॥ ೩ ॥

ವಿಶಸನ ಮಾರಣ ವಿಶರಣ।
ನಿಶುಂಭನ ಕ್ಷಣನ ಸೂದನ ಪ್ರತಿಘಾತಂ॥
ಪ್ರಶಮನ ವರ್ಜನ ಬರ್ಹಣ।
ವಿಶರಣ ಹಿಂಸಾರ್ಥಕಂ ವಧಂ ತಾನಕ್ಕುಂ ॥ ೪ ॥

ಜಿತಕಾಶಿ ಜಿತಾಜಿ ಭಯ।
ದ್ರುತನಪ್ಪಂ ಕಾಂದಿಶೀಕ ನಾಹವಧರೆಯೊಳ್॥
ಪತಿತಂ ಪ್ರಸ್ಕನ್ನಂ ಕಾ।
ದಿ ತಪ್ಪಿಗಿದು (ರಣದ) ತೆಗೆದನಕ್ಕುಂ ನಷ್ಟಂ ॥ ೫ ॥

ಕಂ॥ ವಿಜಯ ಪತಾಕೆ ಯೆದಕ್ಕುಂ ।
ಧ್ವಜ ಕೇತನ (ಕೇತು) ವೈಜಯಂತೀ ನಾಮಂ ॥
ಗಜ ತುರಗ ರಥ ಪದಾತಿ ।
ವ್ರಜಂ ವರೂಥಿನಿಗೆ ನಾಲ್ಕು ಮಂಗಮದಕ್ಕುಂ ॥ ೬ ॥

ಪೃತನಾನೀಕ ಧ್ವಜಿನೀ ।
ಪತಾಕಿನೀ ಸೇನೆ ಬಳೆ ಚಮೂ ಚಕ್ರಾಖ್ಯಂ ॥
ಚತುರಂಗಂ ಸೇನೆ ಸಮ ।
ನ್ವಿತವಿವಿಧವ್ಯೂಹನಿವಹ ಮಕ್ಷೌಹಿಣಿ ತಾಂ ॥ ೭ ॥

ಅಕ್ಕರವೃತ್ತಂ॥
ಒಂದುಸಾಮಜ ಮೊಂದುತೇರ್ ಮೂಱಶ್ವಮೆಯ್ದುಕಾಲಾಳ್ಗಳ್ ಪತ್ತಿಯಕ್ಕುಂ ।
ಸಂದ ಪತ್ತಿಮೂಱಾಗೆ ಸೇನಾಮುಖ ಮಾಮೂಱು ಗುಲ್ಮಂ ಮೂಱು ಗುಲ್ಮ ॥
ಕ್ಕೊಂದು ಗಣ ಮವು ಮೂಱು ವಾಹಿನಿ ತತ್ತ್ರಯಂ ಪೃತನಾಖ್ಯೆ ಪೃತನೆಗಳ್ ಮೂ ।
ಱಕೊಂದಿ ತೋಱಿರೆ ಚಮೂ (ವದು) ಮೂಱನೀಕಿನಿ ಪತ್ತನೀಕಿನಿ ಯಕ್ಷೌಹಿಣಿ ಯೆನಿಕ್ಕುಂ ॥ ೮ ॥

ಕಂ॥ ಅಗ್ರೇಸರಂ ಪುರಸ್ಸರ ।
ನಗ್ರಣಿ ಮುಖ್ಯಂ ಪುರೋಗಮಂ ಪ್ರಷ್ಠಂ ನಿ ॥
ರ್ವ್ಯಗ್ರತೆಯಿಂದಂ ಪಗೆವನ ।
ಮಾಗ್ರಹದಿಂ ನಡೆಯಿಪಂ ಚಮೂಪತಿಯಕ್ಕುಂ ॥ ೯ ॥

ಪದಿಕಂ ಪತ್ತಿ ಪದಾತಂ ।
ಪದಾತಿ ಪಾದಾತಿಕಂ ಪದಾಜಿಗೆ ನಾಮಂ ॥
ಕದನದೊಳದಿರದೆ ಪಗೆವಡೆ ।
ಗಿದಿರ್ಚಿ ನಡೆವಾತೆ ನಭ್ಯಮಿತ್ರೀಣ ನವಂ ॥ ೧೦ ॥

ಕಂ॥ ಅರದಾರೋಹಂ ತಾಂ ರಥಿ ।
ತುರಂಗಮಾರೋಹ ನಱಿಗೆ ಸಾದಿ ಸಮಾಖ್ಯಂ ॥
ದ್ವಿರದಾರೋಹಂ ಯುದ್ಧೇ ।
ದ್ಧರಮನ ನಾಧೋರಣಂ ನಿಷಾದಿ ಯೆನಿಕ್ಕುಂ ॥ ೧೧ ॥

ಕವಚಂ ಜಗರಂ ಸನ್ನಾ ।
ಹ ಪುರಚ್ಛದ ಮಂಗರಕ್ಷೆ ಕಂಕಟಕಂ ವ ॥
ರ್ಮ ವಿನಿತ್ತುಂ [ಕವಚಾಖ್ಯಂ] ।
ಕವಚಿತ ನಾಮುಕ್ತ ನೆನಿಸುಗುಂ ಸನ್ನದ್ಧಂ ॥ ೧೨ ॥

ಶಸ್ತ್ರಂ ಪ್ರಹರಣ ಮಾಯುಧ ।
ಮಸ್ತ್ರಂ ಹೇತಿಗೆ ಸಮಾಖ್ಯೆ ಕೇವಳ ಮಕ್ಕುಂ ॥
ಶಸ್ತ್ರಿಕೆ ಯಷ್ಟಿ ಶಿಲೀಮುಖ ।
ನಿಸ್ತ್ರಿಂಶ ಪ್ರಭೃತಿ ತದ್ವಿಶೇಷಕ ಮಕ್ಕುಂ ॥ ೧೩ ॥

ಶಕ್ತಿ ಮೊದಲಾಗೆ ಪಾಣಿ ವಿ ।
ಮುಕ್ತಂ ಛುರಿಕಾದಿ ತಾ ನಮುಕ್ತಂ ಯೆಂತೊ್ರೀ! ॥
ನ್ಮುಕ್ತಂ ಶರಾದಿ ಮುಕ್ತಾ ।
ಮುಕ್ತಂ ಯಷ್ಟ್ಯಾದಿಕಂ ತದಸ್ತ್ರಾಂತರದೊಳ್ ॥ ೧೪ ॥

ಪರಶು ಕುಠಾರಾಭಿಖ್ಯಂ ।
ಪರಶ್ವಧಂ ಸ್ವಧಿತಿ ಯೆಂಬುದಕ್ಕುಂ ಪತ್ರಂ ॥
ಕ್ಷುರಿಕಾಸಿಧೇನು ಸಂಜ್ಞಾಂ ।
ತರ ಮದು ತಾಂ ಸುರಿಗೆ ಕೊಂತ ವೆನಿಕುಂ ಪ್ರಾಸಂ ॥ ೧೫ ॥

ಅಸಿ ಖಡ್ಗಂ ಬಾಳ್ಹಾಸಂ ।
ಪೆಸರಿಂ ಕೌಕ್ಷೇಯಕಂ ಕೃಪಾಣಾಹ್ವಂ ಮ ॥
ತ್ಸಸಿ ನಿಸ್ತ್ರಿಂಶಂ ಕರವಾ ।
ಲ ಸಾಯಕಂ ರಿಷ್ಟಿ ಮಂಡಲಾಗ್ರಂ ಖಳ್ಗಂ ॥ ೧೬ ॥

ಕಂ॥ ಧನು ಕೋದಂಡಂ ಬಾಣಾ ।
ಸನ ಮಸ್ತ್ರಂ ಕಾರ್ಮುಕಾಖ್ಯ ಮದು ಚಾಪಂ ಸಿಂ ॥
ಜಿನಿ ಜೀವೆ ಮೌರ್ವಿ ಗುಣ ಮೆಂ ।
ಬಿನಿತುಂ ಜ್ಯಾನಾಮ ಮಟನಿ ಕೊಪ್ಪುಱುಗದಱಿಕೊಳ್ ॥ ೧೭ ॥

ವಿಶಿಖ ಪ್ರದರಾಶುಗ ಪ ।
ತ್ರಿ ಶಿಳೀಮುಖ ಕಂಕಪತ್ರ ಮಾರ್ಗಣ [ಖಗ ಬಾ ॥
ಣ] ಶರೇಷು ಸಂಜ್ಞ ಮಱುಗಂ ।
ಖು ಶರವ್ಯ [ನಿಮಿತ್ತ] ವೇಧ್ಯ ಮಂತದು ಲಕ್ಷ್ಯಂ ॥ ೧೮ ॥

ತೂಣೀರ ಮುಪಾಸಂಗಂ ।
ಬಾಣಧಿ ಬಾಣಾಶ್ರಯಂ ನಿಷಂಗಂ ಡೊಣೆಗಳ್ ॥
ಬಾಣದ ಪಿಱಿಕದು ಪುಂಖಂ ।
ಬಾಣದ ಗಱಿ ಪತ್ರಪಾಳಿ ವಾಜ ಮೆನಿಕ್ಕುಂ ॥ ೧೯ ॥

ಗುಣ ನಿರ್ಘಾತ ಪ್ರತಿ ವಾ ॥
ರಣ ಮಕ್ಕುಂ ಗೋಧ ಮದುವೆ ದಲ್ ಕೆಯ್ಪೊಡೆಯುಂ ॥
ಗುಣನಿಕೆ ತಾನಭ್ಯಾಸಂ ।
ಗುಣನಾಸ್ಥಾನಂ ಖಳೂರಿಕಾಭಿಖ್ಯಾನಂ ॥ ೨೦ ॥

ವಸುವಂದಂ ಖೇಟಕ ಮು ।
ಲ್ಲಸಿತ ತ್ಸರು ಖಡ್ಗಮುಷ್ಟಿ ಕೋಶಂ ಕಲಹಂ ॥
ಮಿಸುಗುತ್ತಿರ್ಪ್ಪಗ್ರಂ ತಾ ।
ಮೆ ಶಾಣೆ (ನಿಕಷಂ ಕಷಾ) ಹ್ವಯಂ (ವೇಧನಿಕಂ) ॥ ೨೧ ॥

ತುರಗಂ ಯಯು ಸಪ್ತಿ ಹಯಂ ।
ತುರಂಗಮಂ ವಾಜಿ ವಾಹ ಮಶ್ವಂ ತಾರ್ಕ್ಷ್ಯಂ ॥
ಹರಿ ಘೋಟಕ ಮರ್ವಾಖ್ಯಂ ।
ತುರಂಗಮೆನೆ ಕುದಿರೆ ಬಡಬೆ ವಾಮಿ ಯೆನಿಕ್ಕುಂ ॥ ೨೨ ॥

ಕಂ॥ ಆಜಾನೇಯಂ ವಿನುತ ಕು ।
ಲೇಜಾತಂ ತುರಗ ಸಮಿತಿ ಬಾಹ್ಲೀಕಂ ಕಾಂ ॥
ಭೋಜ ಹಯಂ ವಾನಾಯುಜ ।
ವಾಜಿಕುಳಂ ಪಾರಸೀಕ ಮೆಂದಱಿಗವಱಿಕೊಳ್ ॥ ೨೩ ॥

ಸಿತವರ್ಣಂ ಕರ್ಕಂ ಲೋ ।
ಹಿತ ಮಕ್ಕುಂ ಶೋಣ ಮಸಿತವರ್ಣಂ ಹೇಮಂ ॥
ಸಿತ ಚಕ್ಷು [ಮಲ್ಲಿ] ಕಾಖ್ಯಂ ।
ಸಿತೇತರಾಖ್ಯಂ ತುರಂಗ ಮಿಂದ್ರಾಯುಧನುಂ ॥ ೨೪ ॥

ಶಿಶು ಶಾಬಂ ಪೋತಂ ಮಱಿ ।
ಕಿಶೋರಕಂ ಸೂಕಳಾಹ್ವಯಂ ದುಷ್ಟಾಶ್ವಂ ॥
ಕು [ಶೆ] ರಶ್ಮಿ ಪ್ರಗ್ರಹ ಮದು ।
ಕಶಾಹ್ವಯಂ ಚರ್ಮಯಷ್ಟಿ ಕವಿಕೆ ಖಲೀನಂ ॥ ೨೫ ॥

ರಥದೊಳ್ ಪೂಡುವ ಹಯಮದು ।
ರಥವಾಹಕ ರಥ್ಯನಾಮಧೇಯಂ ಸ್ಥೌರಿ ॥
[ಪತಿ] ತಾಖ್ಯಂ ತಾಂ ಪೃಷ್ಠ್ಯಂ ।
ರಥ ವರದಂ ಸ್ಯಂದನಂ [ಪರೂ] ಥಕ್ಕೆ ಪೆಸರ್ ॥ ೨೬ ॥

ದೇವಾರ್ಘ ಮಪ್ಪುದಕ್ಕುಂ ।
ದೇವರಥಂ ಸಾಂಪರಾಯಿಕಂ ಯುದ್ಧಾರ್ಘಂ ॥
ಕೇವಳ ಮನೇಕವಿಧಕೇ ।
ಳೀವಿಳಸನಹೇತು [ಪುಷ್ಪ]ಕಂ ಪುಷ್ಪರಥಂ ॥ ೨೭ ॥

ಶಕಟಂ [ರ]ಥಾಂಗ [ಮರ] ಸಂ ।
ಜ್ಞಕ ಮಂತದು ಭಂಡಿ ಗಂತ್ರಿ ಕಂಬಳ ವಾಹ್ಯಂ ॥
ಪ್ರಕಟಂ ಕರ್ಣೀರಥನಾ ।
ಮಕ ಮಕ್ಕುಂ ಪ್ರವಹಣಂ ರಥಾಂಗಂ ಚಕ್ರಂ ॥ ೨೮ ॥

ಕಂ॥ ಬಗೆದಱಿಗೆ ವರೂಥಂ ರಥ ।
ದ ಗುಪ್ತಿ ಚಕ್ರಾಗ್ರಧಾಮ ನೇಮಿ ಯೆನಿಕ್ಕುಂ ॥
ನೊಗ ನೆಂಬುದು ಯುಗ ನಾಮಂ ।
ಯುಗಂಧರೋದ್ದೇಶ ದಲ್ಲಿ ಕೂಬರ ಮಕ್ಕುಂ ॥ ೧೯ ॥

ರಥ ಚೋದಕ ನಕ್ಕುಂ ಸಾ ।
ರಥಿ ಸೂತಂ ಕ್ಷತ್ತೃ ಯಂತೃ ಸವ್ಯೇಷ್ಟೃ [ಕನುಂ] ॥
ರಥ [ಸಮುದಾಯಂ] ರಥ್ಯಾ ।
ರಥಕಟ್ಯಾಭಿಖ್ಯಮೆಂದು ತಱಿಸಲ್ಗಱಿವಂ ॥ ೨೦ ॥

ಮ॥ ದ್ವಿರದಂ ದಂತಿ ಮತಂಗಜಂ ಗಜ ಮಿಭಂ ಸ್ತಂಬೇರಮಂ ವಾರಣಂ ।
ಕರಿ ವೇತಂಡ ಮನೇಕಪಂ ರದನಿ ಶುಂಡಾಳಂ ದ್ವಿಪಂ ಕುಂಭಿ ಸಿಂ ॥
ಧುರ ಮೆಂದಿಂತಿವು ಸಾಮಜಾಖ್ಯೆಯೊಳಭಿನ್ನಾರ್ಥಂಗಳಕ್ಕುಂ ವಶಾ ।
ಕರಿಣೀ ಧೇನು ಕರೇಣುಗಳ್ ಗಜವಧೂ ಪರ್ಯಾಯದೊಳ್ ವರ್ತಿಕುಂ ॥೨೧॥

ಕಂ॥ ಕರಿಪೋತಕ ಮದು ಕಳಭಂ ।
ಕರಿಬೃಂದಂ ಗಜತೆ ಹಾಸ್ತಿಕಂ ತಾನಕ್ಕುಂ ॥
ಕರಿಬಂಧನ ಮಾಳಾನಂ ।
ಕರಿನಿವಹವ್ಯೂಹಘಟನೆ ಘಟೆ ಯೆನೆ ಪಡೆಗುಂ ॥ ೨೨ ॥

ವಮಥು ಕರಶೀಕರಂ ದಾ ।
ನಮೆ ವಲಮಕ್ಕುಂ ಮದಾಹ್ವಯಂ ಕೆಯ್ ಹಸ್ತಂ ॥
ಸಮುದಗ್ರ ಮಸ್ತಕಂ ಕುಂ ।
ಭ ಮಾಸನಂ ಸ್ಕಂಧ ಮದಱ ವಾಳಧಿ ವಾಳಂ ॥ ೨೩ ॥

ಮ॥ ಸ್ರ॥ ಪ್ರತಿಮಾನಂ ದಂತಮಧ್ಯಂ ರದನ ಮವು ವಿಷಾಣಂಗಳುತ್ತುಂಗಕುಂಭ ।
ದ್ವಿತಯಂ ಮಧ್ಯಪ್ರದೇಶಂ ಬಿದು ನಯನದುಪಾಂತ್ಯಕ್ಕೆ ನಿರ್ಯಾಣನಾಮಂ ॥
ಶ್ರುತಿಮೂಲಂ ಚೂಳಿಕಾಖ್ಯಂ ಕರಟ ಮದು ಕಟಂ ಪೇಚಕಂ ಪುಚ್ಛಮೂಲಂ ।
ವಿತತಾರಕ್ಷಂ ಶಿರೋಭಾಗದ ಕೆಳಗಣ ಮೆಯ್ ಪದ್ಮಕಂ ಬಿಂದುಜಾಲಂ ॥ ೨೪ ॥

ಕಂ॥ ಗಾತ್ರಮು ಮವರಮು ಮೆಂಬೀ ।
ಗಾತ್ರಂ ಪೂರ್ವಾಪರಾಂಘ್ರಿ ಯುಗಳಮು ಮಕ್ಕುಂ ॥
ತೋತ್ರಂ ವೈಣುಕ ಮಱಿಗೆ ವ ।
ರತಾ್ರ ಭೂಷ್ಯಾಖ್ಯೆ ಕಕ್ಷೆಯೊಳ್ ವರ್ತಿಸುಗುಂ ॥ ೩೫ ॥

ಅಂಕುಶ ಮಕ್ಕುಂ ಸೃಣಿ ವ ।
ರ್ಣಂ ಕುಥ ಮಾಸ್ತರಣಂ ಪ್ರವೇಣಿ ಸಮಾನಂ ॥
ಸಂಕಲೆ ಹಿಂಜೀರಂ ನಿಗ ।
ಳಂ ಕಾಲ್ಗಟ್ಟುಗಳೊಳಂದುಕಾಭಿಖ್ಯಾನಂ ॥ ೩೬ ॥

ಯತಮಂಘ್ರಿ ಕರ್ಮ ಮಂಕುಶ ।
ಗತ (ಚಾ)ವಾರಣ ಯಾತಮೆಂಬುದದು ವೀತಂ ತ ॥
ದ್ವಿವ್ರತೆಯಕ್ಕಂ ಪೆಸರಕ್ಕುಂ ।
ಗತಿಯುಂ ಸ್ಥೂಲೋಚ್ಚಯಾದಿ ಭೇದ ವಿವಿಕ್ತಂ ॥ ೩೭ ॥

ಮದವರ್ಜಿತ ಮುದ್ವಾಂತಂ ।
ಮದಕಳೆನಕ್ಕುಂ ಮದೋತ್ಕಟಂ ವ್ಯಾಳಂ ತಾ ॥
ನದು ದುಷ್ಟಗಜಂ ವಿನಯೋ ।
ಪದ...ಪ್ರವಣ ನೌಪವಾಹಿಕ ಮಕ್ಕುಂ ॥ ೩೮ ॥

ಖರ ಚಕ್ರೀವದ್ವಾಳೇ ।
ಯ ರಾಸಭಾ ಖ್ಯಾತಿ ಗರ್ದಭಂ ತಾನದು ವೇ ॥
ಸರನಶ್ವತರಂ ಪೆಸರೊಳ್ ।
ಕರಭಂ ದಾಸೇರಕಂ ಕ್ರಮೇಳಕ ಮುಷ್ಟ್ರಂ ॥ ೩೯ ॥

ಅದಿದೆನ್ನದೆ ವಾಹನ ಮಾ ।
ವುದಾದೊ [ಡಂ] ಪತ್ರ ಯುಗ್ಯ ಧೋರಣ ನಾಮಂ ॥
ಸದಭಿಮತ ಯಾಪ್ಯಯಾನಕ ।
ಮದು ಶಿಬಿಕಾಖ್ಯಾನ ಮಂದಲಂ ಡೋಲಾಹ್ವಂ ॥ ೪೦ ॥

ಇಂತು

— ಸಮರಾದಿ ಸಂಪ್ರಕೀರ್ಣ ವರ್ಗಂ —



# ಶ್ರೀ ವೀತರಾಗಾಯನಮಃ.

## ನಮಸ್ಸಿದ್ಧೇಭ್ಯಃ



ಕಂ॥ ವೃಷ ಸೌರಭೇಯ ಗೋಪತಿ।
ಋಷಭ ಬಲೀವರ್ದ ಶಾಕ್ವರೋಕ್ಷ ಕಕುದ್ಮ॥
ದ್ವೃಷಭಾಖ್ಯ ಮನಡ್ವಾಹಂ।
ವಿಷಾಣ ಮಂತದಱ ಶೃಂಗ ಕಿಣಿ [ಲದು] ಕಕುದಂ ॥ ೧ ॥

ಸೀರಾದಿ ವಾಹಕಂ ತಾಂ।
ಸೈರಿಕ ಮಱಿಗಲ್ಲಿ ಶಾಕಟಂ ಶಕಟಾಖ್ಯಂ॥
ಓರಂತೆ ಪೃಷ್ಠವಾಹ್ಯಂ।
ಸ್ಥೌರಿ ಯೆನಿಕ್ಕುಂ ಜರದ್ಗವಂ ವೃದ್ಧೋಕ್ಷಂ ॥ ೨ ॥

ಕರವೆಳೆಗಱು ವತ್ಸ ಶಕೃ।
ತ್ಕರಿ ನಾಮಂ ತಿರ್ದಲಾ [ಪ] ಪೋರಿಯೆ ದಮ್ಯಂ॥
ಧುರದೆಡೆಯನಾಂತು ನಡೆವುದು।
ಧುರೀಣ ಧೌರೇಯ ಧುರ್ಯ್ಯ ನಾಮಂ ಭದ್ರಂ ॥ ೩ ॥

ಗಳಕಂಬಳಮಕ್ಕುಂ ಪೆಸ।
ಗೋರ್ಗಳಲ್ಕಿ ಸಾಸ್ನಾಖ್ಯೆ ಪುಚ್ಛಮದು ಲಾಂಗೂಳಂ॥
ಕೊಳಗು ಖುರಂ ಶಫ ಮಂಸ।
ಸ್ಥಳದಿಂ ಮುಂದಣ ಸಹಾಪ್ರದೇಶಂ ಸ್ಕಂಧಂ ॥ ೪ ॥

ಜಾತೋಕ್ಷ ನೆಯ್ದೆ ನೆರೆದುಪ।
ಜಾತವೃಷಂ ತರ್ಣಕಾಭಿಧಾನಂ ಸದ್ಯೋ॥
ಜಾತಂ ನಸ್ತಿತನದು ನ।
ಸ್ಯೋತಂ ನಿರ್ಭಗ್ನಶೃಂಗ ನಕ್ಕುಂ ಕೂಟಂ ॥ ೫ ॥

ಕಂ॥ ಪಸು ಗವ್ಯಸ್ರಾ (ಗೌ) ಸುರ ।
ಭಿ ಸೌರಭೇಯಿಮಾ ಸಮಾಖ್ಯೆ ವರ್ತಿಸುಗುಂ ಗೃ ॥
ಷ್ಟಿ ಸಕೃತ್ಪ್ರಸೂತಿ ಬಹು (ಳ) ।
ಪ್ರಸೂತಿ ತಾನದು [1]ವರೇಷ್ಟ್ಕಾಹ್ವಯಮಕ್ಕುಂ ॥ ೬ ॥

ಧೇನು ನವಸೂತಿ ಬಷ್ಕ ।
ಯಣಿ (ಯುಂಕಡೆಗಂದಿ) ? ಗೋಮತಲ್ಲಿಕೆ ಭದ್ರಾ ॥
ಖ್ಯಾನಂ ನೈಚಿಕೆ ಯೆನಿಕುಂ ।
ತಾನು[ತ್ತ]ಮ ಮದುವೆ (ಗೋಧನಂ) ಗೋವ್ರಜದೊಳ್ ॥ ೭ ॥

ಅನುವರ್ಷಂ ತಪ್ಪದೆ [ತಾಂ] ।
ತೆನೆಯುಪ್ಪುದೆ ದಲ್ ಸಮಾಂಸಮೀನೆಯೆ(ನಿ)ಕ್ಕುಂ ॥
ತೆನೆ ಮಗುಟ್ವುದು ವೇಹತ್ತುಳೆ ।
ತೆನೆ ತಾಂ ಪ್ರಷ್ಠೌಹಿ ಬಂಜೆ ವಶೆಯೆನೆ ಪಡೆಗುಂ ॥ ೮ ॥

ಪೀನೋಧ್ನಿ ಪೀವರಸ್ತನಿ ।
ತಾನೆಂದದು ಕೆಚ್ಚಲೂಧ ಮಾಪೀನಂ ಗೋ ॥
ಸ್ಥಾನಂ ಗೋಷ್ಠಂ ಬ್ರಜ ಮದು ।
ಗೋನಿವಹಂ ಗವ್ಯಗೋತ್ರ ಸಮಜ ಮೆಯಕ್ಕುಂ ॥ ೯ ॥

ಸರಮಾತನೂಜ ಮೃಗದಂ ।
ಶ ರಾತ್ರಿಜಾಗರಕ ಭಷಕ ಕೌಲೇಯಕ ಕು ॥
ಕ್ಕುರನಾಮಮುಂ ಶ್ವಾನಂ ಶುನಿ ।
ಸರಮೆ ಯೆಲರ್ಕಾಖ್ಯೆ ಮಿಕ್ಕ ಪೆಂಕುಳಿ ಯಕ್ಕುಂ ॥ ೧೦ ॥

ಅವಿ ಮೇಷ ಮುರಭ್ರಂ ಮೇಂ ।
ಡ ಮದೇಳಕ ವೃಷ್ಣ್ಯುರಣ(ಕ) ಮೇಕಾರ್ಥಂ ಛಾ ॥
ಗ ಮಜಂ ಮೇಷಂ ಬಸ್ತುಭ ।
ಗಮೆಂಬಿವೆ ಛಗಳೆ(ಕ) [ನಾಮವಾಚಿಗಳೆಕ್ಕುಂ] ॥ ೧೧ ॥

1 ವರಿಷ್ಕ್ಯಕಾ.

ಕಂ॥ ತರುಣಪಶುವೆಲ್ಲ ಮವೆ ಬ ।
ರ್ಕ್ಕರ ಮೆನಿಕುಂ ತೂಬರಂ ವಿಷಾಣವಿಹೀನಂ ॥
ಪುರಿಷಕ್ಕೆ ಗೋಮಯಂ ತಾಂ ।
ಕರೀಷ ಮದು ಭೂತಿ ವಕ್ಷ್ಯೆ ಭಸ್ಮ ಕ್ಷಾರಂ ॥ ೧೦ ॥

ಧರಣೀಸಮುತ್ಥಿತಂ ಪಾಂ ।
ಸು ರೇಣು ಚೂರ್ಣಾಭಿಧಾನಕಂ ಕ್ಷೋದಂ ಧೂ ॥
ಳಿ ರಜಂ ಪರಾಗ ಮೆಂದಿವು ।
ತೆರಳ್ದು ಪುದಿದಿರ್ದುದಕ್ಕು ಮದು ಪಿಂಜಳಕಂ ॥ ೧೩ ॥

ಗೋಮಹಿಷ ಪ್ರಭೃತಿ ಪಶು ।
ಸ್ತೋಮಂ ಪ್ರಧನಂ ಧನಾಹ್ವಯಂ ಜೀವಧನಂ ॥
ಗೋಮಿ ಬಹುಗೋಧನಂ ಗೋ ।
ಸ್ವಾಮಿ ಗವಾಧಿಪತಿ ತಾನವಂ ಗೋವಳಿಗಂ ॥ ೧೪ ॥

ಇಂತು

—ಪಶುವರ್ಗಂ—



# ಶ್ರೀ ವೀತರಾಗಾಯ ನಮಃ.

## ನಮಸ್ಸಿದ್ಧೇಭ್ಯಃ



ಕಂ॥ ಕ್ಷೀರಂ ದುಗ್ಧಂ ಪಾಲ್ ದಧಿ ।
ಸಾರಂ ಹಯ್ಯಂಗವೀನ ಮೆನೆ ನವನೀತಂ ॥
ಗೋರಸ ದಂಡಾಹತ ಮಥಿ ।
ತಾರಿಷ್ಟೋದಶ್ವಿದಾಹ್ವ ಮೆಂತೆದು ತಕ್ರಂ ॥ ೧ ॥

ಘೃತ ಮಾಜ್ಯಂ ಸರ್ಪಿಸ್ಸ ।
ಜ್ಜ್ವಿತಮಕ್ಕುಂ ಪೆತ್ತುದಱಿಗೆ ಶೀನಂ ಸ್ತ್ಯಾನಂ ॥
ದ್ರುತಮದು ವಿಲೀನ ಮಾದುದು ।
ಶೃತಂ ವಿಪಕ್ವಂ ರಸಾಗ್ರಮೆಂತೆದು ಮಂಡಂ ॥ ೨ ॥

ದಧಿಸಕ್ತು ಕರಂಬಾಖ್ಯಂ ।
ದಧಿಮಂಥಂ ಮಸ್ತುವೆಂಬುದಕ್ಕುಂ ಪೊಯ್ನೀರ್ ॥
ದಧಿಸ್ಪೃಷ್ಟಂ ದಾಧಿಕ ನಾ ।
ಮಧೇಯಕಂ ದಧಿ ಘನೇತರಂ ತಾಂ ದ್ರಪ್ಸಂ ॥ ೩ ॥

ವ್ಯಂಜನಮದು ನಿಷ್ಠಾನಂ ।
ಗಂಜಿ ಯವಾಗೂಷ್ಟಿಕಾ ವಿಲೇಪೀನಾಮಂ ॥
ಕಾಂಜಿಕಮೆನೆ ತಿಳಿಗಱಿ ಮಿಗೆ ।
ರಂಜಿಸುವರನಾಳವಜ್ಜಿಕಾಭಿಖ್ಯಾನಂ ॥ ೪ ॥

ಮೈರೇಯ ಮಾಸವಂ ಮಧು ।
[ಹಾರಹುರಂ] ತಾಂ ಪ್ರಸನ್ನೆ ಪಾನಂ ಕಲ್ಯಂ ॥
ವಾರುಣಿ ಕಾದಂಬರಿ ಯದು ।
ಸೀರಿಪ್ರಿಯ ಸೀಧು ಮದಿರೆ ಸುರೆ(ಯಿರೆ) ಕಳ್ಳುಂ ॥ ೫ ॥

ತ್ರಿಪದಿ॥ ಪಾನಂ ಗೋಷ್ಠಿಕೆಯು ದಾಪಾನಂ ಶುಂಡಾಪ್ರ ।
ಪಾನಂ ಕಳ್ಳಡಿಹ ಕಡೆಸೊರ್ಕು ಚಕ್ಕಣಂ ॥
ತಾನದು ಪೆಸರೊಳೆದುಂ ॥ ೬ ॥

ಕಂ॥ ಉಣಿಸಭ್ಯವಹರಣಂ ಭ ।
ಕ್ಷಣ ವಶನಂ ಜಗ್ಧಿ ಜೇಮನಂ ಭುಕ್ತಿಸಮಂ ॥
ತಣಿವುದು ಸಾಹಿತ್ಯಂ ತ ।
ರ್ಪಣವೆನಿಸುಗು ಮಾಶಿತಂ ಭವಂ ಪರ್ಯಾಪ್ತಂ ॥ ೭ ॥

ಗ್ರಾಸಂ ಕಬಳಂ ತುತ್ತು ಪಿ ।
ಪಾಸೋದನ್ಯಾ ತೃಷಾಹ್ವಯಂ ತರ್ಷಂ [ತೃ ॥
ಷ್ಣಾಶಾ] ಕ್ಷುಧಾಶನಾಯಾ ।
ಗ್ರಾಸೇಚ್ಛಂ ಕ್ಷುದ್ಬುಭುಕ್ಷೆಗಳ್ ಪಸಿವೆನಿಕುಂ ॥ ೮ ॥

ಭುಕ್ತೋಚ್ಛಿಷ್ಟಂ ಫೇಳಿಕೆ ।
ಭುಕ್ತಾಶನಶೇಷ ಮಂಜುಗೆ ವಿಘಸ ಮದಕ್ಕುಂ ॥
ಭುಕ್ತೋದ್ಗಿರಣಂ ವಮನಂ ।
ಭುಕ್ತಿಸಮುತ್ಸರ್ಜನಂ ಸಮಂತುಪವಾಸಂ ॥ ೯ ॥

ಕೂರಾ ಶನಾನ್ನ ಭಿಸ್ಸಾ ।
ಹಾರಾ[ಂಧ]ಸ್ಸಂಜ್ಞ ಮೋದನಂ ಪರಮಾನ್ನಂ ॥
[ಕ್ಷೈರೇ]ಯಂ ತುಯ್ಯಲ್ ಸೌ ।
ವೀರಂ ಧಾನ್ಯಾಮ್ಲ ವಾರನಾಳಂ ಶುಕ್ಲಂ ॥ ೧೦ ॥

ಅರಳಾಗಿ ಪುರಿದ ಧಾನ್ಯೋ ।
ತ್ಕರಮಂತವೆ ಲಾಜೆ ಪೃಥುಕ ಮೆನಲವಲಕ್ಕುಂ ॥
ವರಪಕ್ವಮದಭ್ಯೂಷಂ ।
ಪರಿಭೃಷ್ಟಂ ಯವ ಮದೆಱಗೆ ಧಾನಾ ನಾಮಂ ॥ ೧೧ ॥

ಅಕ್ಕರಂ॥ ಅಡುಗೆಯೊಳಗೆಯುಂ ಪೈಷ್ಟಿಕಭಕ್ಷ್ಯಂ ಪೂಪಲಿಕಾಪೂಪನಾಮಮುಂ ।
ಒಡನೆ ತುಪ್ಪದಿಂ ಸಂಸ್ಕೃತಮಾದುದು ಸಾರ್ಪಿಷ್ಕಂ ಲವಣದಿಂ ಲಾವಣಿಕಂ ॥
ಕೆಡಿಸಿ ಕಟ್ಟಿರ್ದುದು ಗುಡವಿಕಾರಂ ಕೂರ್ಚಿಕೆ ಪೆಸರಿಂ ಕೀಲಾಟ ಮಕ್ಕುಂ ।
ಗುಡವಿಕಾರಂ ಫಾಣಿತಂ ಮತ್ಸ್ಯಂಡಿ ಖಂಡಶರ್ಕರೆ ಸಿತಾಹ್ವಯ ಮೆನಿಕುಂ॥ ೧೨॥

ಕಂ॥ ಕುಸುಮರಸ ಮಾಕ್ಷಿಕಂ ಕ್ಷೌ ।
ದ್ರ ಸಾರಕಾಖ್ಯಾತಿ ಮಧುವಿನೊಳ್ ವರ್ತಿಸುಗುಂ ॥
ರಸ ಪಾರದ ಸೂತಕ ಚಪ ।
ಲ[ಸಂ]ಜ್ಞಿತಂ ಗಿರಿಶವೀರ್ಯ ಮದು ಪಾದರಸಂ ॥ ೧೩ ॥

ಭಡಿತಂ ತಾಂ ಶೂಲ್ಯಂ ಸು ।
ಟ್ಟಡೆಗು ಭರೂಟಕ ಮುಖಾಪಿಪಕ್ವಮದುಖ್ಯಂ ॥
ಬಿಡೆ ನೇರಿದು ಕಿಱಿಯವಾಗಿರೆ ।
ಕಡಿದೊಣಗಿಸಿದಾಮಮಾಂಸಮದು ವಲ್ಲೂರಂ ॥ ೧೪ ॥

ತುವರಂ ತಿಕ್ತಂ ಮಧುರಂ ।
ಲವಣಂ ಕಟು ಕಾರಮೆಂಬು ರಸಮಾಱು ತೆಱಂ ॥
ನವವಿಧ ಮಕ್ಕುಂ ಶೃಂಗಾ ।
ರ ವೀರ ರೌದ್ರಾದಿ ಭೇದದಿಂ ನಾಟ್ಯರಸಂ ॥ ೧೫ ॥

ಜೋಳಂ [ಕಳಿಕಂ]ಯಮು ।
ಸಾಳಂ ಸ್ತಂಬ ಕರಿಧಾನ್ಯಕಂ ವ್ರೀಹಿ ಮಹಾ ॥
ಶಾಳಿ ಯೆನಿಕ್ಕುಂ ಲೋಹಿತ ।
ಶಾಳಿ ಬಯಿಕ್ಕುಱಿದ ಶಾಳಿ ಯೆದು ಕಳಮಾಖ್ಯಂ ॥ ೧೬ ॥

ಅಕ್ಕರಂ॥ ತುವರ್ಯಾಢಕಿ ನಿಷ್ಪಾವವಲ್ಲ ಸಂಜ್ಞಿಕವದವರೆ ಗೋಧೂಮಮುಂ ಗೋ ।
ದುಮೆ ತಾಂ ಹರಿ[ಮಂಥಂ] ಚಣಕಾಖ್ಯ ಮುದುರ್ದ ಮಾಷಂ ವಕಷ್ಟಕಂ ವನ
ಮುದ್ಗಂ ॥
ಯವಮದು ಪೀತಕಂ ಕೋದ್ರವ ಮಕ್ಕುಂ ಕೋರದೂಷಂ ಸ್ಯಾಮಕಾ ।
ಹ್ವ ಬರಗು ವದಕ್ಕುವಂತಾ ಪ್ರಿಯಂಗು ಕಂಗು ಸಮಾಖ್ಯಂ ॥ ೧೭ ॥

ಕಂ॥ ಅಲಸಂದೆ ರಾಜಮಾಷಂ ।
ಕುಳುತ್ಥಕಂ ಕೊಳ್ಳು ಮಸೂರಕಂ ಮಂಗಲ್ಯಂ ॥
ತಿಳೆ ಮೆಳ್ಳು ವನಜ ಮದು ಜ ।
ರ್ತ್ತಿಳೆ ಮತಸೀ ನಾಮಮುಮೆ ಕುಸುಮೆ ಕುಸುಂಬಂ　　　　॥ ೧೮ ॥

ಸಾಸಿವೆ ರಾಜಿಕೆ ಸರ್ಷಪ ।
ವಾಸುರಿ ಬಿಳಿದಪ್ಪ ಸರ್ಷಪಂ ಸಿದ್ಧಾರ್ಥಂ ॥
ದೂಸಂ ತೃಣಧಾನ್ಯ(ಮು)ಮಟ ।
ವೀಸಂಭವ ಮದೆ ಗವೇಧುಕಂ ನೀವಾರಂ　　　　॥ ೧೯ ॥

ಪರಿಪಾಕಂ ಬೆಳಸು ಕಡಂ ।
ಗರಂ ಬುಸಂ ನಿಮಿರ್ದ [ಸಸ್ಯ] ಮಂಜರಿ ಕಣಿಶಂ ॥
ಪರಿಘಾತಂ ಬಹುಲೀಭೂ ।
ತರಾಶಿ ಧಾನ್ಯತ್ವಚಂ ತುಷಂ ತಾನಕ್ಕುಂ　　　　॥ ೨೦ ॥

ಸದಕಂ ತಂಡುಲ ಮಕ್ಷತ ।
ಮದು ನಿಸ್ತುಷವಾದ ಸಿಂಬಿ ಧಾನ್ಯಮದಕ್ಕುಂ ॥
ವಿದಳಂ [ಪಪರ್ಪ] ಖ್ಯಂ ಪಿ ।
ಟ್ಟದು ಪಿಷ್ಟಂ ಚೂರ್ಣಿತಂ ನಮುನ್ನಂ ಕ್ಲಿನ್ನಂ　　　　॥ ೨೧ ॥

ಶಿಂಬಾಧಾನ್ಯಂ ಶಮಿ ತಾ ।
ನೆಂಬುದು ಕಿಂಶಾರು ಶೂಕ ಮದು ಮಾಷಾದ್ಯಂ ॥
ಶಿಂಬಾಧಾನ್ಯಂ [ಶಾಲಿ] ।
ಸ್ತ್ರಂಬಕರಿ ಪ್ರಭೃತಿ ಶೂಕಧಾನ್ಯ ಮದಕ್ಕುಂ　　　　॥ ೨೨ ॥

ಇಂತು

—ಧಾನ್ಯವರ್ಗಂ—



(ಕಾಂಡಸಮಾಪ್ತಿ ಪ್ರಶಸ್ತಿವಾಕ್ಯಂ)

ಕಂ॥ * ಉಪಶಮಿಸುಗೆ ಸಕಲೋರ್ವಿಯೊ ।
ಳುಪದ್ರವಂ ಡಿಂಬಮನೆಯ ಮುಪಲಿಂಗಂ ಮಿ ॥
ಕ್ಕುಪಸರ್ಗ ಮರಿಷ್ಟಂ ದು ।
ಷ್ಟಪೀಡೆ ಡಾಮರ ಮಜನ್ಯ ಮೀತಿಪ್ರಕರಂ ॥ ೧ ॥

ಸಮುದಂ ಸಮ್ಮದ ಮಾನಂ ।
ದಮುದ್ಧವಂ ಮುತ್ಸಭಾಜನಂ ಪ್ರೀಮಂ ಪ್ರೀ ॥
ತಿ ಮಹೋತ್ಸವಂ ಪ್ರಮೋದಂ ।
ಸಮುಗತಿಯಿಂದೊಂದಿ ಕುಂದದಿರ್ಕನವರತಂ ॥ ೨ ॥

ಸಮನಿಸುಗೆ ಜನಕ್ಕೆಳ್ಗೆಯು ।
ಮಮಿಷ್ಟ ಮಂಕ್ಷೇಮವೃತ್ತಿ ಕುಶಲಂ ಭದ್ರಂ ॥
ಭವಿಕಂ ಭವ್ಯಂ ಶ್ರೇಯಂ ।
ಶಿವಂ ಶುಭಂ ಸ್ವಸ್ತಿ ಮಂಗಳಂ ಕಲ್ಯಾಣಂ ॥ ೩ ॥

ಶಾಲಿನೀ॥ ಇಂತೇಕಾರ್ಥಂ ಭೂರಿಶಬ್ದ ಪ್ರಪಂಚಂ ।
ಸಂತಂತೆಬ್ಯಕ್ತಿಯಿಂದೋದಿ ಪೇಳ್ದಂ ॥
ಚಿಂತಾತೀತ ಪ್ರಾಂತಭಂಧ್ವಸ್ತದೋಷ ।
ಧ್ವಾಂತಾಂತ ಶ್ರೇಯಸ್ಕಮಂ ನಾಗವರ್ಮಂ ॥ ೪ ॥

---

* ಅರಿಷ್ಟಪರ್ಯಾಯ ಪದಗಳೆನ್ನು "ಅರಿಷ್ಟವು ನಾಶವಾಗಲಿ" ಎಂದೂ ಉಪದ್ರವ, ಸಂತೋಷ, ಮಂಗಳ ಈ ಪರ್ಯಾಯ ಪದಗಳನ್ನು "ಮಾಗಳ ವುಂಟಾಗಲಿ" ಎಂದೂ ಪ್ರಶಸ್ತಿ ವಾಕ್ಯದೊಡನೆ ಸೇರಿಸಿ ಜಾಣ್ಮೆಯಿಂದ ಪ್ರಯೋಗಿಸಿರುವನು. ಇವು ಈ ಧಾನ್ಯವರ್ಗಕ್ಕೆ ಬೇರೆ ಸೇರುವಂತಿಲ್ಲ.

ಮ॥ ಶ್ರುತದೇವೀ ಮಕರಂದಕಲ್ಪಲಪನಂ ವಾಕ್ಶ್ರೀನಿವಾಸಾಂಬುಜಾ ।
ಯಿತವಕ್ತ್ರಂ ರಸಭಾವಭಾಸುರಸಮುದ್ಯದ್ಭಾರತೀನರ್ತನೋ ॥
ಚಿತರಂಗಪ್ರತಿಮಾನನಂ ಪ್ರವಿಲಸದ್ವಾಕ್ಸುಂದರೀಕಂದುಕಾ ।
ಯತಕೇಳೀಭವನಾಜಿರೋ[ಪಮ] ಮುಖಂ ಭೂಭಾಗದೊಳ್ ನಾಕಿಗಂ॥

ಇದು

ಸಮಸ್ತಭುವನಜನಸ್ತೂಯಮಾನಾ

ನೂನ ಕವಿತಾಗುಣೋದಯಂ,

ಶ್ರೀ ನಾಗವರ್ಮ ವಿರಚಿತಮಪ್ಪ

ಅಭಿಧಾನಕೋಶದೊಳ್

ಏಕಾರ್ಥಕಾಂಡಂ ಪ್ರಥಮಂ

—ಸಮಾಪ್ತಂ—



1364—13

# ಶ್ರೀ ವೀತರಾಗಾಯ ನಮಃ.

ನಮಸ್ಸಿದ್ಧೇಭ್ಯಃ

## ಸಾಮಾನ್ಯಕಾಂಡಂ ದ್ವಿತೀಯಂ

೧ ವಿಶೇಷಣವರ್ಗಂ

—೧—

ಕಂ॥ ಪ್ರಕೃತಿ ವಿಶೇಷ್ಯಾಧೀನಂ ।
ಪ್ರಕೀರ್ಣವರ್ಗಂ ಕ್ರಿಯಾಗುಣ ದ್ರವ್ಯಪರಂ ॥
ಪ್ರಕಟಾರ್ಥಮಿದೆನೆ ಸಾಮಾ ।
ನ್ಯಕಾಂಡಮಂ ಸಪ್ರಪಂಚಮಂ ವರ್ಣಿಸುವೆಂ ॥ ೧ ॥

ಉಪೇಂದ್ರವಜ್ರಂ ॥
ಪರಂ ಪ್ರಧಾನಂ ಪ್ರವರಂ ಪ್ರವೇಕಂ ।
ವರಂ ವರೇಣ್ಯಂ ಪ್ರಮುಖಂ ಪ್ರಬರ್ಹಂ ॥
ಪುರೋಗಮಂ ಪ್ರಾಗ್ರಹರಂ ವರೀಯಂ ।
ವರಿಷ್ಠ ನಗ್ರೇಸರ ನಗ್ರಗಣ್ಯಂ ॥ ೨ ॥

ಕಂ॥ ಪ್ರತಿಭಾ ಸಂವಿತ್ಪ್ರಜ್ಞಾ ।
ಮತಿ ಮೇಧಾ ಬುದ್ಧಿ ಶೇಮುಷೀ [ಚಿ]ತ್ಪ್ರೇಕ್ಷಾ ॥
ಪ್ರತಿಪತ್ತಿ ಧೀ ಮನೀಷಾ ।
ನ್ವಿತನಪ್ಪಂ ಪಂಡಿತಂ ವಿಪಶ್ಚಿ ದ್ಧಿಷಣಂ ॥ ೩ ॥

ಸೂರಿ ಬುಧಂ ಕವಿ ವಾಗ್ಮಿ ವಿ ।
ಶಾರದ ನಭಿರೂಪ ನನ್ವಿತಂ ದೋಷಜ್ಞಂ ॥
ಧೀರಂ ಕೃತಿ ಕೃಷ್ಟಿ ಸಭಾ ।
ಸ್ತಾರಂ ಸಭ್ಯಂ ಸಭಾಸದಂ ವಿದ್ವಾಂಸಂ ॥ ೪ ॥

ಕಂ॥ ಕೃತಹಸ್ತಂ ಕುಶಲಂ ಶಿ ।
ಕ್ಷಿತಂ ಪ್ರವೀಣಂ ವಿಚಕ್ಷಣಂ ನಿಷ್ಣಾತಂ ॥
ಕೃತಮತಿ ನಿಪುಣಂ ವಿಜ್ಞಂ ।
ಕೃತಕರ್ಮಂ ಕೋವಿದಂ [ವಿದಂ ಜ್ಞಂ] ಜಾಣಂ ॥ ೫ ॥

ಮ॥ ಸ್ರ॥
ಕೃತಶಿಕ್ಷಾಸ್ತ್ರಂ ಸಹಸ್ತಂ ಸಮುಪಗತನತಿವ್ಯಾಕುಳಂ ತಾಂ ವಿಹಸ್ತಂ ।
ಚತುರಂ ಛೇಕಂ ವಿದಗ್ಧಂ ಸಮುಖ ನನಲಸಂ ಪ್ರೌಢ ನತ್ಯಂತದಕ್ಷಂ ॥
ಕಿತವಂ ಮಾಯಾವಿ ಧೂರ್ತಂ ವಿಕೃತಪರ ನತಿಕ್ರೂರಕರ್ಮಂ ನೃಶಂಸಂ ।
ಪ್ರತಿಭಾನ್ವೀತಂ ಪ್ರಗಲ್ಭಂ ಪಟು ಬಗೆಯೆ ಕರಂ (ಧೃಷ್ಟ)ನಾತಂ ವಿಯಾತಂ ॥೬॥

ಕಂ॥ ಬಾಲಿಶ ನಜ್ಞಂ ಮೂರ್ಖಂ ।
ಬಾಲಂ ಮೂಢಂ ಜಡಂ ಯಥೋದ್ಗತನೆನೆಯುಂ ॥
ಲೋಲುಪ ನಭಿಲಾಷುಕ ನತಿ ।
ಲಾಲಸಕಂ ಗೃಧ್ನು ಲಂಪಟಂ ಲುಬ್ಧನವಂ ॥ ೭ ॥

ಅಮಿತರ್ದ್ಧಿ ಸಮೃದ್ಧ ನುದಾ ।
ತ್ತಮನಸ್ಕಂ ತಾಂ ಮಹೇಚ್ಛ ನುನ್ಮನ ನುತ್ಕಂ ॥
ಸುಮನಂ ಪ್ರಹೃಷ್ಟಚಿತ್ತಂ ।
ವಿಮನಂ ದುರ್ಮನ (ನಹೀನ) ಮನ ನುದ್ಯುಕ್ತಂ ॥ ೮ ॥

ಪ್ರಭು ಪರಿವೃಢ ನೀಶಂ ಸ್ವಾ ।
ಮಿ ಭರ್ತೃ ಪತಿ ನಾಥ ನಧಿಪ ನೀಶ್ವರ ನಿಂದ್ರಂ ॥
ಸುಭಗಂ ಚಕ್ಷುಷ್ಯಂ ವ ।
ಲ್ಲಭಂ ಪ್ರಿಯಂ ಪ್ರಣಯಿ ಕಾಂತ ನಿಷ್ಟಂ ದಯಿತಂ ॥ ೯ ॥

ಅರಿ ಶತ್ರು ಶಾತ್ರವಂ ವೈ ।
ರಿ ರಿಪು ಸಪತ್ನಂ ವಿರೋಧಿ ದಸ್ಯು ವಿಪಕ್ಷಂ ॥
ಪರ ನಹಿತ ನನ್ಯ ನಸುಹೃದ ।
ನರಾತಿ ಪರಿಪಂಥಿ ವಿದ್ವಿಷಂ ವಿದ್ವಿಷ್ಟಂ ॥ ೧೦ ॥

ಮ॥ಸ್ರ॥ ಕುಳಜಾತಂ ತಕ್ಕ ನಾರ್ಯನಂ ಸುಜನ ನಭಿಜನಂ ಸಾಧು ಸದ್ವೃತ್ತನಪ್ಪಂ।
ಖಳನುಗ್ರಂ ಪಾಪಿ ದುಷ್ಟಾತ್ಮಕ (ನವನೆ) ಶಠಂ ದುರ್ಜನಂ ತಾ ನನಾರ್ಯಂ॥
ಅಳಸಂ ಮಂದಂ ಜಡಂ ಮಂಥರ ನೆನಿ(ಪನವನುಂ) ಶೀತಲಂ ದೀರ್ಘಸೂತ್ರಂ।
ಕೆಳೆಯಂ ಮಿತ್ರಂ ವಯಸ್ಯಂ ಸುಹೃದ ನೆನೆ ಸಹಾಯಂಗೆ ಪರ್ಯಾಯನಾಮಂ
॥ ೧೧ ॥

ಕಂ॥ ಶೂರಂ ವಿಕ್ರಾಂತಂ ಕಲಿ।
ಚಾರಭಟಂ ವೀರಪುರುಷನಾತಂಗೆ ಪೆಸರ್॥
ಶೂರೆ ನವ ನಯ್ಯಗಲಿ ದಲ್।
ಭೀರುಕರಂ ಕಾತರಂ ಭಯಸ್ಥಂ ತ್ರಸ್ತಂ ॥ ೧೨ ॥

ವಾಚಾಳಂ ಜಲ್ಪಾಕಂ।
ವಾಚಾಟಂ ವಾವದೂಕ ನಕ್ಕುಂ ಗಳಪಂ॥
ನೀಚಂ ಕ್ಷುದ್ರಂ ಪಿಶುನಂ।
ಸೂಚಕ ನೆಂದಱಿದುಕೊಳ್ಗೆ ಕರ್ಣೇಜಪನಂ ॥ ೧೩ ॥

ಮಾನ್ಯಂ ಪ್ರಕೃಷ್ಟ ನಱಿಗೆ ವ।
ದಾನ್ಯಂ ಪ್ರಿಯವಾದಿ ಮಿಕ್ಕದಾನಿ ವದನ್ಯಂ॥
ಧನ್ಯಂ ಸುಕೃತಿ ವಿದಗ್ಧಂ।
ಮನ್ಯ ನವಂ ದುರಭಿಮಾನಿ ಮತ್ತಂ ಕ್ಷೀಬಂ ॥ ೧೪ ॥

ಮಂದಾಕ್ರಾಂತಂ॥

ಆಮರ್ತ್ಯಂ ನಿಂಮಿಗಿಲೆನ್ನತುಸು ಸರ್ಪಪನ ಮುನ್ನರ್ಧನತಂ ?।
ನರ್ಮಕ್ರೀಡಾ ಚತುರವಚನ ಶ್ಲಾಘಿ ವೈಹಾಸಿಕಾಖ್ಯಂ॥
ಮರ್ಮಘ್ನಂ ತಾಂ ವ್ಯಥನಕಥಕಂ ಶಿಕ್ಷಿದಾನಂ [ಸು] ಕರ್ಮಂ।
ಕರ್ಮೋದ್ಯುಕ್ತಂ ತನುಮನ ನವಂ ಕರ್ಮರಂ ಕರ್ಮಶೂರಂ॥೧೫॥

ಕಂ॥ ಚಿಕುರಾಖ್ಯಂ ಚಪಲಂ [ತಾಂ]।
ಸುಕಲಂ ಸಲೆ ದಾನಿ ಭೋಗಿ ಯೆನೆ ಸಲ್ವಾತಂ॥
ವಿಕೃತಂ ವಿಪ್ರಕೃತಂ ತಾಂ।
ಪ್ರಕೃಷ್ಟತರಮೂರ್ತಿ ಸಿಂಹಸಂಹನನನವಂ ॥ ೧೬ ॥

ಕಂ॥ ಲೋಹಲ ನನಭಿವ್ಯಕ್ತ ।
ವ್ಯಾಹಾರಂ ಕಱಿಯೆ ವಿಹ್ವಲಂ ವಿಕ್ಲಬನು ॥
ತ್ಸಾಹಿ ಮಹೋತ್ಸಹ ದೋಷ ।
ಗ್ರಾಹಿ ಪುರೋಭಾಗಿ ದುರ್ಮುಖಂ ಮುಖರ ನವಂ ॥ ೧೭ ॥

ಚಂ॥ ವಿವಶ ನರಿಷ್ಟ ದುಷ್ಟಮತಿ ಸೂಕ್ತ ನತಿಪ್ರಿಯವಾದಿ ಸಜ್ಜನಂ ।
ಪ್ರವರಗುಣಾನ್ವಿತಂ ಸುಹೃದಯಂ ಹೃದಯಾಳು ಶರಾರು ಘಾತುಕಂ ॥
ಪ್ರವಣನತೀವತತ್ಪರ ನಹಂಯು ವಹಂಕೃತಿ ಸಂಯುತಂ ಮಹೋ ।
ತ್ಸವನಿರತಂ ಶುಭಂಯು ಸದಯಂ ಘೃಣಿ ಕಾರುಣಿಕಂ ಪರೀಕ್ಷಕಂ ॥ ೧೮ ॥

ಕಂ॥ ಸ್ವವಶಂ ಸ್ವಚ್ಛಂದಂ ಸ್ವೈ ।
ರವೃತ್ತಿಯಿಂ ಕಿಂಪಚಾನನವ ನತಿಕೃಪಣಂ ॥
ಶಿವತಾತಿ ಶಿವಂಕರಂ ಪ ।
ಲ್ಲವಿಕಂ ವಿಟ ನಾತತಾಯಿ ವಧೆಗುದ್ಯುಕ್ತಂ ॥ ೧೯ ॥

ಪ್ರಸೃತಂ ಪ್ರಸಕ್ತ ನಪ್ಪವ ।
ನ ಸಮ್ಮತಂ ತಾಂ ಪ್ರಣಾಯ್ಯನೆನೆ ಪಡೆಗುಂ ಕಾ ॥
ರ್ಯಸಹಿಷ್ಣು ಶಶ [ಕ] ನತಿವಿನ ।
ಯಸಂಭೃತಂ ನಿಭೃತ ಸಾದೃತಂ ಸಾದಂಣಂ ॥ ೨೦ ॥

ವಿಘ್ನಂ ತಾಂ ಪ್ರತ್ಯೂಹಮು ।
ಪಘ್ನಮದಾಶ್ರಯ ಮಧೀನ ನಱಿಗಾಯತ್ತಂ ॥
ನಿಘ್ನಂ ಪರವಶವರ್ತಿ ಕೃ ।
ತಘ್ನಂ ಕೃತನಾಶಿ ವಕ್ರಶೀಳಂ ಕುಟಿಳಂ ॥ ೨೧ ॥

ಖಚರ॥ ಸ್ಥೂಳಳಕ್ಷನತಿವ್ಯಯಶೀಳಂ ಕ್ರೋಧನ ನುದ್ಧತಕೋಪ ನೀ ।
ರ್ಷ್ಯಾಳು ಮತ್ಸರ ಸಂಯುತನ [ಭ್ಯಾ ಗಾರಿಕ] ನಾತ್ತಕುಟುಂಬ ನು ॥
ತ್ತಾಳ ನುತ್ಸುಕ ನೌದರಿಕಂ ಕುಕ್ಷಿಂಭರಿ ಭಕ್ಷಕ ನದ್ಮರಂ ।
ವ್ಯಾಳ ನುಗ್ರ ಶಠಂ ಜವಿ ಜಂಘಾ [ಳಾಖ್ಯ]ನಲೋಳಮನಂ ಸ್ಥಿರಂ ॥ ೨೨ ॥

ಕಂ॥ ಮುಂದಱಿದು ಕಜ್ಜಮಂ ತಱಿ ।
ಸಂದಿರ್ಪಂ ದೀರ್ಘದರ್ಶಿ ತೊಟ್ಟನೆ ಮುಂದಿ ॥
ದೊರ್ಂದೆಡೆಗುಚಿತವ ನಱಿಯಲ್ ।
ಸಂದವ ನುತ್ಪನ್ನಮತಿ ಕರಂ ವ್ಯುತ್ಪನ್ನಂ ॥ ೨೩ ॥

ಸ್ಥಾನಸ್ಥನಾಗಿ ಲೋಗರ ।
ನೇನಪ್ಪೊಡಮುಱಿದೆ ನುಡಿವವಂ ಗೋಷ್ಠಶ್ವಂ ॥
ತಾ ನೆನಿಕುಮುಱಿಗೆ ಪಂಚಜ ।
ನೀನಂ ಭಾಂಡಾದಿರತ ನೆನಿಪ್ಪ ನರಾಖ್ಯಂ ॥ ೨೪ ॥

ಅತಿಥಿಪ್ರಾಹುಣಿಕಾಭ್ಯಾ ।
ಗತ ಸಂಜ್ಞಿತನಕ್ಕುಮಾತ ನಾದೇಶಿಕನ ॥
ರ್ಚಿತ ನಪಚಾಯಿತ ನಭ್ಯ ।
ರ್ಕಿತ ಪೂಜಿತನರ್ಥಿ ಯಾಚಕಂ ಮಾರ್ಗಣಕಂ ॥ ೨೫ ॥

ಏಕಾಗ್ರಮೇಕತಾನಮ ।
ದೇಕಾಯನ ಮೇಕತಾನ ಗತನಪ್ಪ ವನ ॥
ವ್ಯಾಕುಳ ನೇಕಾಗ್ರ್ಯಂ ಮ ।
ತ್ತೇಕಕನೇಕಾಕಿಯೊರ್ವನವನ ಸಹಾಯಂ ॥ ೨೬ ॥

ಮ॥ ನಿಕುರುಂಬಂ ನಿವಹಂ ವ್ರಜಂ ಸಮುದಯಂ ಬೃಂದಂ ನಿಕಾಯಂ ಚಯಂ ।
ನಿಕರಂ ಸಂಹತಿ ಸಂಚಯಂ ಸಮಿತಿ ಸಂದೋಹಂ ಸಮಾಜಂ ಕುಲಂ ॥
ಪ್ರಕರಂ ಸಂಕುಲ ಮುತ್ಕರಂ ತತಿ ಗಣಂ (ಶ್ರೇಣಿ) ಪ್ರವರ್ಗಂ ಕದಂ ।
ಬಕ ಮೋಘಂ ತತಿ ವಾರ ಮಾವಳಿ ಸಮೂಹಂ ವ್ರಾತ ಮೇಕಾರ್ಥಕಂ॥೨೭॥

ಕಂ॥ ಸಮರೂಪ ಜಂತು ಸಮುದಯ ।
ಮೊಮದಕ್ಕುಂ ಸಂಘ ಸಾರ್ಥ [ಮನಿತುಂ) ತಿರ್ಯ ॥
ಕ್ಸಮುದಾಯಂ ಯೂಥಂ ಪಶು ।
ಸಮೂಹಕೆ (ಮದು ತಾಂ) ಸಮಂತು ಸಮಜ ಮೆನಿಕ್ಕುಂ ॥ ೨೮ ॥

ಕಂ॥ ಉಪಸಂಹೃತಮಾದುದು ರಾ ।
ಶಿ ಪುಂಜ ಮುತ್ಕರ [ಸ] ಮುಚ್ಚಯಂ ಕೂಟಂ ತಾಂ ॥
ವ್ಯಪನೀತ ವಿಜಾತೀಯ ।
ಪ್ರಪಂಚ [ಮದು] ಪಙ್ತಿ ಮಾಲೆ ಯೋಳಿ ಯೆನಿಕ್ಕುಂ ॥ ೨೯ ॥

ಗ್ರಾಮ ಸಮೂಹಂ ಗ್ರಾಮತೆ ।
ಧೂಮಾವಳಿ ಧೂಮ್ಯೆ ಜನತೆ ಜನಸಮಿತಿ ಖಲ ॥
ಸ್ತೋಮಂ ಖಲ್ಯಾಖ್ಯಂ ಗಣಿ ।
ಕಾಮಂಡಳಿ ಸಮುಚಿತೋಕ್ತಿಯಿಂ ಗಾಣಿಕ್ಯಂ ॥ ೩೦ ॥

ಮಾನವ್ಯಂ ಮಾನವ ತತಿ ।
ಧೇನುತೆಯದು ಧೇನುನಿವಹ ಮೌಕ್ಷಕ ಮಱಿಗು ॥
ಕ್ಷಾನೀಕ ಮುಷ್ಟ್ರ ನಿವಹಂ ।
ತಾನೌಷ್ಟ್ರಕ ಮಶ್ವಚಯ ಮದಂತಶ್ವೀಯಂ ॥ ೩೧ ॥

ಕಾವಚಿಕಂ ಕವಚಿಗಣಂ ।
ಯೌವತ ಮದು ಯುವತಿಜನರ ಸಂಘಾತ ಮಪೂ ॥
ಪಾವಳಿ ಯಾಪೂಪಿಕ ಮಿಂ ।
ತೀವಿಧದಿಂ ಪ್ರತ್ಯಯಾಂತಸಮುದಯ ಮಕ್ಕುಂ ॥ ೩೨ ॥

ದಶ ದಶ ಶತಂ ಸಹಸ್ರಂ ।
ದಶಶತ ಮಯುತಂ ಸಹಸ್ರದಶಕಂ ಲಕ್ಷಂ ॥
ದಶಗುಣ ಮಯುತಂ ಪ್ರಯುತಂ ।
ದಶಲಕ್ಷಂ ಕೋಟಿ ತಾಂ ದಶಘ್ನಂ ನಿಯುತಂ ॥ ೩೩ ॥

ಗಣಿತಂ ಸಂಖ್ಯಾತಂ ಬಹು ।
ಗಣ ಶಬ್ದಂ ಭೇದದಲ್ಲಿ ಸಂಖ್ಯೆ ಯದಕ್ಕುಂ ॥
ಗಣನೀಯಂ ಸಂಖ್ಯೇಯಂ ।
ಗಣನಾತಿಕ್ರಾಂತ ಮಂತದಕ್ಕು ಮಸಂಖ್ಯಂ ॥ ೩೪ ॥

ಕಂ॥ ಯುಗಳಂ ಯುಗ್ಮಂ ದ್ವಂದ್ವಂ ।
ಯುಗ ಮುಭಯಂ ಯಾಮಳಂ ದ್ವಯಂ ದ್ವಿತಯಂ ಸಂ ॥
ಜ್ಞೆಗಳಿವೆ ಪೊಣರೊಳ್ ಪುಂಸ್ತ್ರೀ ।
ಯುಗವಾಚಕಮಱಿಗೆ ಮಿಥುನಮುಂ ದಂಪತಿಯುಂ ॥ ೩೫ ॥

ಸದೃಶಂ ಸಮಂ ಸಮಾನಂ ।
ಸದೃಕ್ಸದೃಕ್ಷಂ ನಿಭಂ ಪ್ರಕಾಶಂ ಪ್ರತಿಮಂ ॥
ತದನುವಿಧಾಯಿ ತದಾಭಂ ।
ತದುಪಮ ಮೆಂದಱಿದು ಕೊಳ್ಗೆ ತುಲ್ಯಾರ್ಥಂಗಳ್ ॥ ೩೬ ॥

ಸಮುದಗ್ರ ಮುನ್ನತಂ ತುಂ ।
ಗ ಮುಚ್ಛ್ರಿತಂ ಪ್ರಾಂಶು ದೀರ್ಘ ಮುಚ್ಚಂ ನ್ಯಜ್ನೀ ॥
ಚಮವಾಗ್ರಂ ಖರ್ವಂ ಕು ।
ಬ್ಜ ಮಾನತಂ ತಾನದೆಂಬುದಕ್ಕುಂ ಹ್ರಸ್ವಂ ॥ ೩೭ ॥

ನತ ಮಾವಿದ್ಧಂ ವ್ಯಾಕುಂ ।
ಚಿತ ಮೂರ್ಖಮ ದನೃಜು ಭಂಗುರಂ ಜಿಹ್ಮಂ ಫೇ ॥
ಲ್ಲಿತ ಮಾಭುಗ್ನಂ ವಕ್ರಾ ।
ಕೃತಿ ಯಕ್ಕುಂ ಪ್ರಗುಣ ಮಕುಟಲಂ ರಿಜು ಸರಲಂ ॥ ೩೮ ॥

ವಿರಳಂ ತನು ಪೇಲವ ಮದು ।
ನಿರಂತರಂ ಸಾಂದ್ರ ಮತಿಘನಂ ಬಹಳಂ ಬಂ ॥
ಧುರ ಮಾನಮ್ರಂ ವಿನತಂ ।
ನಿರಸ್ತ ಮಪವಿದ್ಧ ಮಪಹೃತಂ (ವಿ)ಧ್ವಸ್ತಂ ॥ ೩೯ ॥

ಛನ್ನಂ ಛಾದಿತ ಮಪ್ಪುದು ।
ಭಿನ್ನಂ ಭೇದಿತ ಮುಪಾಂಗಿತಂ ಯುಕ್ತಂ ನಿ ॥
ಷ್ಪನ್ನಂ ಸಿದ್ಧಂ ನುತ್ತಂ ।
ನುನ್ನಂ ಪ್ರೇಂಖೋಳಿತಂ ಪ್ರಕಂಪಿತ ಮಕ್ಕುಂ ॥ ೪೦ ॥

ಕಂ॥ ಗುಪ್ತಂ ಗೋಪಾಯಿತ ಮುಮ ।
ಲುಪ್ತಂ ಪ್ರತ್ಯವಸಿತಂ ಪ್ರಫುಲ್ಲಂ ಫುಲ್ಲಂ ॥
ಜ್ಞಪ್ತಂ ತಾಂ ಜ್ಞಾಪಿತ ಮುಮ ।
ಲಿಪ್ತಂ ದಿಗ್ಧಂ ಸಮಾವೃತಂ ಸಂವೀತಂ ॥ ೪೧ ॥

ಪೂರ್ಣಂ ಪೂರಿತ ಮಂತೆಮ ।
ತೂರ್ಣಂ ತ್ವರಿತಂ ಪ್ರತಾರಿತಂ ವಂಚಿತ ಮು ॥
ದ್ಘೂರ್ಣಂ ಸಮುದ್ಯತಂ ಸಂ ।
ಘೂರ್ಣಿತ ಮಕ್ಕುಂ ನಿಕಾಮ ಮೆನೆ ಪರ್ಯಾಪ್ತಂ ॥ ೪೨ ॥

ಕ್ಷೀಣಂ ಜೀನಂ ಜೀರ್ಣಂ ।
ತ್ರಾಣಂ ತ್ರಾತಂ (ಸಮಂತು) ರಕ್ಷಿತ ಮವಿತಂ ॥
ಘ್ರಾಣಂ ಘ್ರಾತಂ ಪೀತಾಮೋದಂ ।
ಹ್ರೀಣಂ ಹ್ರೀತಂ ವಿಲಜ್ಜಿತಂ ತಾನಕ್ಕುಂ ॥ ೪೩ ॥

ಪ್ರತಿಬಂಧ ಮ(ದ)ಕ್ಷಿಪ್ತಂ ।
ಪ್ರತಿಹತ ಮುಪಹಸ್ತಿತಂ ನಿರಾಕೃತ ಮಾಜ್ಯಂ ॥
ಪ್ರತಿಕೂಲಂ ಪ್ರತಿಲೋಮಂ ।
ಪ್ರತೀಪಮುಕ್ಕು ಮಪಸವ್ಯ ಶಬ್ದೈಕಾರ್ಥ್ಯಂ ॥ ೪೪ ॥

ಮೃದು ಸುಕುಮಾರಂ ಕೋಮಳ ।
ಮದು ಕಠಿನಂ ನಿಷ್ಠುರಂ ಕಠೋರಂ ಜರಠಂ ॥
ಸುದೃಢಂ ಗಾಢಂ ನಿಬಿಡಂ ।
ನಿದಿಗ್ಧ ಸಂಕೀರ್ಣ ಮಾಚಿತಂ ಸಮುಚಿತ್ತಂ ॥ ೪೫ ॥

ಮಾತೀಂ ಪ್ರತ್ನ ಪುರಾಣ ಪು ।
ರಾತನ ಶಬ್ದಂ ಚಿರಂತನಾರ್ಥ ದೊಳೆತಿವಿ ॥
ಖ್ಯಾತಂ ನವ್ಯಂ ನೂತ್ನಂ ।
ನೂತನ ಮಭಿನವ ಮೆನಿಪ್ಪುದಱಿಗೆ ನವೀನಂ ॥ ೪೬ ॥

ಕಂ॥ ಪ್ರತ್ಯುಕ್ತಮುಪವ್ಯಸ್ತವ ।
ದತ್ಯುತ್ಕಟ ಮಪ್ಪುದಕ್ಕು ಮಧಿಕಂ ಪ್ರಬಳಂ ॥
ಪ್ರತ್ಯಾಖ್ಯಾತಂ ತ್ಯಕ್ತಂ ।
ಪ್ರತ್ಯುಪ್ತಂ ಖಚಿತ ಮುದ್ಧೃತಂ ಸಮುದಕ್ತಂ ॥ ೪೭

ಭಿನ್ನಂ ಭಂಗುರ ಭಗ್ನಂ ।
ಛಿನ್ನಂ ವೃಕ್ಣಂ ದ್ವಿಧಾಕೃತಂ ಛಿತ ಮಕ್ಕುಂ ॥
ಸ್ಕನ್ನಂ ಗಳಿತಂ ಭ್ರಷ್ಟಂ ।
ಪನ್ನಂ ಪತಿತಂ ಪರಿಚ್ಯುತಂ ವಿಗತಾರ್ಥಂ ॥ ೪೮ ॥

ಮಂದಾಕ್ರಾಂತಂ ॥
ದಾತಂ ಲೂನಂ ದಿತ ಮಱಿಗೆ [ಹೀನಂ ವಿ] ಧೂತಂ ವ್ಯಪೇತಂ ।
ಶಾತಂ ಕ್ಷಾಮಂ ನಿಶಿತ(ಮೊನೆ)ಶಾತಂ ಕ್ಷುತಂ ತೇಜಿತಾರ್ತ್ಥಂ ॥
ಸ್ಫೀತಂ ಸ್ಫಾರಂ ಘನ ಮೆನಿಕುಮಾಸಾಧಿತಂ ಲಬ್ಧ ಮಾಪ್ತಂ ।
ಪ್ರೀತಂ ಹೃಷ್ಟಂ ಸಮುದಿತ(ಮುತಂ) ಪ್ಲುಷ್ಟ ಮಕ್ಕುಂ ಸುತಪ್ತಂ ॥ ೪೯ ॥

ಕಂ॥ ಅವಕೃಷ್ಟಂ ನಿಷ್ಕಾಸಿತ ।
ಮವರೀಣಂ ಧಿಕ್ಕೃತಂ ಕರಾಳಂ ವಿಕಟಂ ॥
ಅವಕುಂಠಿತ ಮವರೂಷಿತ ।
ಮವಿಗೀತಂ ಪಲವುಸೂೞಿಗೊಳಂ (ವಿದಿತಾರ್ಥಂ) ॥ ೫೦ ॥

ದಮಿತಂ ದಾಂತಂ ಶಾಂತಂ ।
ಶಮಿತಂ ವಿಧುತಂ ವಿಧೂತ ಮಾರ್ದ್ರಂ ಸಾರ್ದ್ರಂ ॥
ಸ್ತಿಮಿತಂ ತಿಮಿತಂ ಮೃಷ್ಟಂ ।
ಪ್ರಮಾರ್ಜಿತಂ ಕ್ಲಿಷ್ಟ ಮಂತದಕ್ಕುಂ ಕ್ಲಿಶಿತಂ ॥ ೫೧ ॥

ಮೃಗಿತಂ ಮಾರ್ಗಿತ ಮಕ್ಕುಂ ।
ಸ್ಥಗಿತಂ ಗೂಢಂ ಪಣಾಯಿತಂ ತಾಂ ಪಣಿತಂ ॥
[ವಿಗತಚ್ಛವಿ ನಿಷ್ಪ್ರಭ ಮದು]
ವಿಗರ್ಹಿತಂ ನಿಂದಿತಂ ಪ್ರಬುದ್ಧಂ ಬುಧಿತಂ ॥ ೫೨ ॥

ಕಂ॥ ಭೈರವ ಮುಗ್ರಂ ಭೀಷ್ಮಂ ।
ದಾರುಣ ಮಾಭೀಳ ಮಾಸುರಂ ಪ್ರತಿಭಯದಂ ॥
ಘೋರಂ ಭೀಷಣ ಮಧಿಕ ।
ಕ್ರೂರಂ ರೌದ್ರಂ ಪ್ರಚಂಡ ಮುಲ್ಬಣ ಮಕ್ಕುಂ ॥ ೫೩ ॥

ಉದ್ಧುರ ಮುದ್ಭಟ ಮುನ್ಮುಖ ।
ಮುದ್ಧತ ಮುಚ್ಛೃಂಖಲಂ ನಿರರ್ಗಳ ಮಕ್ಕುಂ ॥
ಬದ್ಧಂ ಪರ್ಯ್ಯಸ್ತಂ ಕೃತ ಮಪಿ ।
ನದ್ಧಂ ಸಂಘಾಟಿತಂ ಸಿತಂ (ತಾಂ) ಮೂತಂ ॥ ೫೪ ॥

ಬಹು ಭೂಯಿಷ್ಠ ಮದಭ್ರಂ ।
ಬಹುಳಂ ಪುರು ಭೂರಿ ಸುಪ್ರಭೂತಂ ಪ್ರಾಜ್ಯಂ ॥
ಬೃಹ ದುರು ರುಂದ್ರಂ ಪೃಥು ಗುರು ।
ಮಹದ್ವಿಶಾಳಂ ವಿಶಂಕಟಂ ವಿಸ್ತೀರ್ಣಂ ॥ ೫೫ ॥

ಅಣು ಸೂಕ್ಷ್ಮಂ ಲೇಶಂ ತ್ರುಟಿ ।
ಕಣಂ ಲವಂ ಸ್ತೋಕ ಮಲ್ಪ ಮಾತ್ರಾದಭ್ರಂ ॥
ಅಣಮು ಕಿಱಿದಪ್ಪುದದು ತಾ ।
ನಣಿಷ್ಠ ಮದು ಪೀನ ಪೀವರಾಖ್ಯಂ ಸ್ಥೂಲಂ ॥ ೫೬ ॥

ಸಮ ಮಖಿಳಂ ನಿಖಿಳಂ ವಿ ।
ಶ್ವ ಮಶೇಷಂ ಕೃತ್ಸ್ನ ಮವಿಕಳಂ [ಪೂರ್ಣಂ] ಸ ॥
ರ್ವ ಮನೂನಂ ನಿಶ್ಶೇಷಂ ।
ಸಮಗ್ರ ಮೆಂದಿವು ಸಮಸ್ತ ವಾಚಿಗಳಕ್ಕುಂ ॥ ೫೭ ॥

ಮ॥ ಸ್ರ॥
ಕಮನೀಯಂ ಚಾರು ರಮ್ಯಂ ರುಚಿರ ಮತಿಮನೋಹಾರಿ ಹೃದ್ಯಂ ಪ್ರಶಸ್ತಂ ।
ರಮಣೀಯಂ ಸುಂದರಂ ಪೇಶಲ ಮತಿಶಯಶೋಭಾನ್ವಿತಂ ದರ್ಶನೀಯಂ ॥
ಕಮನಂ ಕಮ್ರಂ ಸುರೂಪಂ ಶುಭತಮ ಮಭಿರಾಮಂ ಪ್ರಹೃಷ್ಯಂ ಪರಾರ್ಧ್ಯಂ ।
ಸುಮನೋಜ್ಞಂ ವಲ್ಗು ವಾಮಂ ಪ್ರಿಯ ಮದು ಮಧುರಂ ಮಂಜುಳಂ ಮಂಜು
ಸೌಮ್ಯಂ ॥ ೫೮ ॥

ಕಂ॥ ಅವಮಂ ಖೇಟಂ ಹತಕಂ ।
ವಿವರ್ಣ ಮಥಮಂ ನಿಕೃಷ್ಟ ಮಣಕಂ ಕಾಂಡಂ ॥
ಅವಕೃಷ್ಟ ಮಪಶದಂ ಜೇ ।
ಳೆ ವವದ್ಯಂ ಕುತ್ಸಿತಂ ಕುಪೂಯಂ ಯಾಪ್ಯಂ ॥ ೫೯ ॥

ಚಲ ಲೋಲಂ ಚಪಲಂ [ಚಂ ।
ಚಲ ತರಳ]ಚಲಾಚಲಂ ಪರಿಪ್ಲವ ವಚನಂ ॥
ಕಲಿಲಂ ಕಲುಷಿತ (ಮೆನಲಾ) ।
ವಿಲ ಮಪ್ಪು ದನಾವಿಳಂ ಪ್ರಸನ್ನಂ ಸ್ವಚ್ಛಂ ॥ ೬೦ ॥

ಮಲಿನಂ ಮಲೀಮಸಂ ಕ ।
ಶ್ಮಲ ಮೆನಿಕುಂ [ಮಲ] ವಿದೂಷಿತಂ ಶುದ್ಧ ಮದು ॥
ಜ್ಜ್ವಲ ಮತಿಮೇಧ್ಯಂ ವೀಧ್ರಂ ।
ಮಲರಹಿತಂ ಶುಚಿತಮಂ ಪವಿತ್ರಂ ಪೂತಂ ॥ ೬೧ ॥

ಅವದಾತಂ ಶುಭ್ರಂ ಶ್ವೇ ।
ತ ವರ್ಜುನಂ ಪಾಂಡು ಪಾಂಡರಂ ಶುಚಿ ಶುಕ್ಲಂ ॥
ಧವಳಂ ವಳಕ್ಷಮೆನೆ ಗೌ ।
ರವರ್ಣವಾಪಾಂಡು ದೂಸರಂ ತಾನೆನಿಕುಂ ॥ ೬೨ ॥

ಶ್ಯಾಮಳ ಮಸಿತಂ ಕೃಷ್ಣಂ ।
ಶ್ಯಾಮಂ ಕಾಳಂ ಕಿತಿಯು ನೀಳಂ ತಾನಂ ॥
ತಾ ಮೇಚಕರುಚಿ ಪಾಂಡು ।
ಶ್ಯಾಮಂ ಕಲ್ಮಾಷ ಮದುವೆ ದಲ್ ಕಬುರ್ರಂ ॥ ೬೩ ॥

ಅರುಣಂ ಶೋಣಂ [ಕೋಕನ ।
ದ ರೋಚಿ] ರಕ್ತ ಮದು ಲೋಹಿತಂ ಸಂಧ್ಯಾಭಂ ॥
ಅರುಣಶ್ವೇತಂ ಪಾಟಳ ।
ಮರುಣಾಸಿತ ಮಾಗೆ ಧೂಮ್ರ ಧೂಸರ ನಾಮಂ ॥ ೬೪ ॥

ಕಂ॥ ಪಿಂಗಂ ಕಪಿಳಂ ಬಭ್ರು ಪಿ ।
ಶಂಗಂ ಹರಿ ಪಿಂಗಳಂ ಕಡಾರಂ ಕಪಿಶಂ ॥
ಹಂಗ ಮೆ ನಿಪಬಣ್ಣಂ? ।
ತಾಂ ಗಡ ಪೀತಂ ಹರಿತ್ಪಲಾಶಂ ಹರಿತಂ ॥ ೬೫ ॥

ಕೆಂಬಸುರಿಸೆದಿರೆ ಪಿಂಜರ್ಕ ।
ಮೆಂಬುದು ವರ್ಣಾಂತರಂ ಸಿತಾಸಿತಮಿಶ್ರಂ ॥
ತಾಂ ಬಗೆಯೆ ಶಬಳ ಮೆನೆ ಪಡೆ ।
ಗುಂ ಬಹುವಿಧಮಿಶ್ರವರ್ಣಮಕ್ಕುಂ ಚಿತ್ರಂ ॥ ೬೬ ॥

* ಸತ(ತ) ಮವಿಚ್ಛಿನ್ನ ಮನಾ ।
ರತಂ ಸದಾ ಶಶ್ವದ ನಿಶ ಮನವರತಂ ಸಂ ॥
ತತ ಮಶ್ರಾಂತಂ ಧ್ರುವ ಮವಿ ।
ರತಂ [ನಿರಂ]ತರ ಮಜಸ್ರ ಮೆನೆ ತಾಂ ನಿತ್ಯಂ ॥ ೬೭ ॥

ಸವಿಧಂ ಸವಿಾಪ ವಭ್ಯಾ ।
ಶ ವಂತಿಕಂ ನಿಕಟ ಮಂತೆದಭ್ಯರ್ಣಂ ಪಾಶ್ರಂ ॥
ತ ವುಪಾಂತ ಮಂತದಾಸ ।
ನ್ನ ವಾಚಕಂ ಗೆಂಟು ವಿಪ್ರಕೃಷ್ಟಂ ದೂರಂ ॥ ೬೮ ॥

ನೇದಿಷ್ಠಮ [ದ]ಂತಿಕ ತಮ ।
ಮಾದಂ ದೂರಂ ದವಿಷ್ಠ ಮಧಿಕ ಮನಃಪ್ರ ॥
ಹ್ಲಾದಕರಂ ತಾಂ ಪ್ರೇಷ್ಠಂ ।
ಕ್ಷೋದಿಷ್ಠಂ ಕ್ಷುದ್ರತಮ ಮೆನಿಪ್ಪುದದಕ್ಕುಂ ॥ ೬೯ ॥

ಆದಿ ಮುಖಂ ಕಡೆ ಚರಮಂ ।
ಪಾದಂ ತುರ್ಯಂ ಸಮಗ್ರ ಮಗ್ರಿಮ ಮದು ಮ ॥
ತ್ತಾದಿಮ ಮಾದ್ಯಂ ಮಧ್ಯದೊ ।
ಳಾದುದು ಮಧ್ಯಮ ಮೆನಿಕ್ಕು ಮಂತಿಮ ಮಂತ್ಯಂ ॥ ೭೦ ॥

* ಇದು ಆಧಾರದ ಓಲೆಯ ಪ್ರತಿಯಲ್ಲಿ ಮಾತ್ರವಿದೆ.

ಸ್ರ॥ ಪ್ರಾವೃಷ್ಯಂ ಪ್ರಾವೃಷೇಣ್ಯಂ ಹಿಮಸಮಯಭವಂ ಹೈಮನಂ ಗ್ರೈಷ್ಮಿಕಂ ಗ್ರೀ।
ಷ್ಮಾವಿರ್ಭೂತಂ ಶರತ್ಕಾಲದೊಳುಪಜನಿತಂ ಶಾರದಂ ದೇವಸತ್ಕಂ ।
ದೈವೀಯಂ ಮಾನುಷಂ ಮಾನವಸಮುದಿತ ಮಾಹೇಯ ಮಾಸರ್ಪಜಾತಂ ।
[ಸೌವರ್ಗ್ಯಂ] ಗಮ್ಯಮೆಲ್ಲಂ ಬಗೆಗನುಗತಿಯಿಂದಭ್ರಿಯಂ ಮೇಘಜಾತಂ ॥ ೭೧ ॥

ಕಂ॥ ಜಾತಾಭ್ರ ಮಭ್ರಿಯಂ ತಾಂ ।
ಜಾತೋಜ್ವ್ವಳತಾರಕಂ ನಭಂ ತಾರಕಿತಂ ॥
ನೌತಾರ್ಯಂ ನಾವ್ಯಂ ಪ್ರಾ ।
ಗ್ಭೂತಾರ್ಥಂ ಭೂತಪೂರ್ವ ಮೆಂಬುದೆನಿಕ್ಕುಂ ॥ ೭೨ ॥

ಇಂತು

— ವಿಶೇಷಣವರ್ಗಂ —



# ಶ್ರೀ ವೀತರಾಗಾಯ ನಮಃ.

ನಮಸ್ಸಿದ್ಧೇಭ್ಯಃ

೨ ಸಾಮಾನ್ಯಕಾಂಡಂ ೨ ವಿಶೇಷ್ಯವರ್ಗಂ

ಮಾಲಿನೀ॥ ಅನುಭವ ಮುಪಭೋಗಂ ಭುಕ್ತಿ ನಿರ್ವೇಶನಾಮಂ।
ವಿನಯ ಮದು ವಶಿತ್ವಂ ಪ್ರಶ್ರಯಂ ಭಕ್ತಿಭಾವಂ॥
ಅನುಶಯ ಮನುತಾಪಂ ವಿಪ್ರತೀಸಾರ ಮಕ್ಕುಂ।
ಮನದೊಳೊಗೆದ ಚಿಂತಾಪೀಡೆ ತಾನಾಧಿ ಶೋಕಂ ॥ ೧ ॥

ಕಂ॥ ಪರಿಭೂತಿ ನಿಕಾರಮ ನಾ।
ದರಂ ತಿರಸ್ಕಾರ ಮಭಿಭವಂ ಭಂಗಂ ಸ॥
ತ್ಕರಣಂ ಸಂಭಾವನ ಮಾ।
ದರಂ ಪುರಸ್ಕಾರ ಮಱಿಗೆ ಮನ್ನಣೆ ಯಕ್ಕುಂ ॥ ೨ ॥

ದೋಹಲ ವಿಚ್ಛೆ ಮನೋರಥ।
ಈಹೆ ಸ್ಪೃಹೆ ಕಾಂಕ್ಷೆ ವಾಂಛೆ ಯಭಿಲಾಷೆ ಕೌ॥
ತೂಹಲ ಕೌತುಕ ಕುತುಕ ಕು।
ತೂಹಲ ಶಬ್ದಂ ಸಮಾನವಾಚಕ ಮಕ್ಕುಂ ॥ ೩ ॥

ಸ್ನೇಹ ಮಜರ್ಯಂ ಸಖ್ಯಂ।
ಸೌಹಾರ್ದಂ ಪ್ರೀತಿ ಮೈತ್ರಿ ಸಾಪ್ತಪದೀನಂ॥
ಸೌಹೃದ ಮದು ವಿದ್ವೇಷಂ।
ದ್ರೋಹಂ ವೈರಂ ವಿರೋಧ ಮೆನೆ ಪಗೆ ಯಕ್ಕುಂ ॥ ೪ ॥

ಶಂಕೆ ಭಯಂ ಸಾಧ್ವಸ ಮಾ।
ಶಂಕಂ ತ್ರಾಸಂ ದರಂ ವಿಭೀತಿ ಸಮಾನಾ॥
ರ್ಥಂ ಕಲುಷಂ ದೋಷಂ ಪ್ರತಿ।
ಘಂ ಕೋಪ (ಮಾಮರ್ಷ) ಮೆಂಬುದದು ತಾಂ ಕ್ರೋಧಂ ॥ ೫ ॥

ಕಂ॥ ಕಪಟಂ ಕೂಟಂ ವ್ಯಾಜಂ ।
ವ್ಯಪದೇಶಂ ಕೈತವಂ ಮಿಷಂ ಛದ್ಮಾರ್ಥಂ ॥
ವಿಪರೀತಂ ವ್ಯತ್ಯಾಸಂ ।
ವಿಪರ್ಯಯಂ ವ್ಯತ್ಯ [ಯಂ]ವಿಲೋಮ ಮದಕ್ಕುಂ ॥ ೬ ॥

ಅವಲೇಪಂ ಮದ ಮುತ್ಸೇ ।
ಕ ಮುದ್ಧವಂ ದರ್ಪ ಮೊಗೆ ದಹಂಕೃತಿ ಗರ್ವಂ ॥
ಅವಗಣನ ಮವಜ್ಞಾನ ಮ ।
ದವಹೇಳಂ ರೀಢೆ ಯೆಂಬುದಱಿ ಗವಮಾನಂ ॥ ೭ ॥

ಕ್ಷಾಂತಿ ತಿತಿಕ್ಷೆ ಸಹಿಷ್ಣುತೆ ।
ಯಂತಾ ಕ್ಷಮೆ ಸಾಹಸಂ ದಲವದಾನಂ ವಿ ॥
ಕ್ರಾಂತಂ ಪರಾಕ್ರಮಂ ಶೌ ।
ರ್ಯಂ ತೇಜೋ ಗುರುಭುಜಪ್ರತಾಪಂ ವೀರ್ಯಂ ॥ ೮ ॥

ಪರಿಚಯ ಮದು ಸಂಸ್ತವನಂ ।
ಹರಣ ಮುಪಾದಾನ ಮುಜ್ಝನಂ ವ್ಯುತ್ಸರ್ಗಂ ॥
ಪರಿಸರ್ಪಣಂ ವಿಹಾರಂ ।
ಪರಿಕ್ರಮಂ ವಿಂಬಮೂರಣಂ ವ್ಯವಸಾಯಂ ॥ ೯ ॥

ಪ್ರಸಭ ಮೆನಿಕ್ಕುಂ ಹಠವೃ ।
ತಿ ಸೌಷ್ಠವಂ ತಾನದಂ ತವಷ್ಟಂಭಾಖ್ಯಂ ॥
ಮಸೃಣಂ ಸ್ನಿಗ್ಧಂ ಚಿಕ್ಕಣ ।
ಮಸಕೃ ದಭೀಕ್ಷ್ಣಂ ಪುನರ್ಮುಹುರ್ಭೂಯೋರ್ಥಂ ॥ ೧೦ ॥

ವೃಥೆ ಮೋಘಂ ವಂಧ್ಯಂ ಮುಧೆ ।
ಮಿಥ ಮನ್ಯೋನ್ಯಂ ಪರಸ್ಪರಂ (ವ್ಯತಿ) ಭಾವಂ ॥
ಪ್ರಥೆ ವಿಖ್ಯಾತಿ ಪ್ರಥನಂ ।
ಪೃಥಗ್ವಿನಾನಾ ಋತೇಂತರೇಣ ವಿನಾರ್ಥಂ ॥ ೧೧ ॥

ಉಪೇಂದ್ರ॥ ಅತಿಸ್ಫುಟಂ ಸ್ಪಷ್ಟ ವಿನಿಶ್ಚಿತಾರ್ಥಂ ।
ಪ್ರತೀತ ಶಬ್ದಂ ವಿಶದಾರ್ಥಮಕ್ಕುಂ ॥
ವಿತರ್ಕಸಂದೇಹ ವಿಕಲ್ಪಶಂಕಾ ।
ಮತಿಭ್ರಮಾಖ್ಯಂ ವಿಚಿಕಿತ್ಸಿತಾರ್ಥಂ ॥ ೧೦ ॥

ಕಂ॥ ಅರ ಮಹ್ನಾಯ ಕ್ಷಿಪ್ರಂ ।
ತ್ವರಿತಂ ದಾಗ್ಝಂಕ್ಷು ಝಡಿತಿ ಲಘು ಶೀಘ್ರಂ ಸ ॥
ತ್ವರ ಮಾಶು ಚಿಜ್ಜರಂ ತಾಂ ।
ಚಿರ ಮತಿವೇಳಂ ಶನೈಃ ವಿಳಂಬಂ ಮಂದಂ ॥ ೧೨ ॥

ರಹ ಮೇಕಾಂತಂ ವಿಜನಂ ।
ರಹಸ್ಯ ಮಾವಿಷ್ಕೃತಂ ಪ್ರಕಾಶಂ ಪ್ರಕಟಂ ॥
ಕುಹನಾ ಶಾಠ್ಯಂ ಡಂಭಂ ।
ಗಹನಂ ಕಷ್ಟಂ ಸಘೋರ ಮಂತದು ಕೃಚ್ಛ್ರಂ ॥ ೧೪ ॥

ಸವ್ಯಂ ವಾಮಶರೀರ ಮು ।
ಸವ್ಯಂ ದಕ್ಷಿಣವಿಭಾಗ ಮಕ್ಕು ವಿಷ್ಕಂ ॥
ಭ ವ್ಯಾಸಾಖ್ಯ ಮದಗಲಂ ।
ಸು (ವ್ಯ) ಕ್ತಂ ದೈರ್ಘ್ಯ ನಾಮ ಮೞ ಗಾಯಾಮಂ ॥ ೧೫ ॥

ಆವೇಶಂ ಸಂರಂಭಂ ।
ವ್ಯಾವೃತ್ತಿ ನಿವೃತ್ತಿ ವಿಷ್ಟ ಮಂದ ಮರಂ ಪ್ರ ॥
ಸ್ತಾವ ಮದವ (ಸ)ರ ಮಾಕಾ ।
ರಾವೃತಿ ಯವಹಿತ್ಥಮಿಂಗಿತಂ ತಾ ನಿಂಗಂ ॥ ೧೬ ॥

ಅಪಗಮಮತ್ಯಯ,..... ।
ಮಪಹಾರಂ ಪರಿಮಳಂ ವಿಮರ್ದಂ ಕ್ಷೋದಂ ॥
ಕ್ಷಿಪಿ ಸಂಸರ್ಗಂ ಮೇಳಕ ।
ಮುಪಕ್ರಮಂ ಪ್ರಕ್ರಮಂ ಪ್ರಸಾದಂ ಪ್ರಣಯಂ ॥ ೧೭ ॥

ಕಂ॥ ದೋಷ ವಪರಾಧ ವಾಗಮ ।
ಶೇಷಂ ನ್ಯಕ್ಷಂ ವಿಯೋಗ ವಿಧುರಾಖ್ಯಂ ವಿ ॥
ಶ್ಲೇಷಂ ಪರಿರಂಭಣ [ಸಂ ।
ಶ್ಲೇಷಮು ದುಪಗೂಹನಂ] ಪರಿಷ್ವಂಗಾರ್ಥಂ ॥ ೧೮ ॥

ಉಪವಾಸ ಮೌಪವಸ್ತ್ರಂ ।
ಕೃಪಾನುಕಂಪಂ ದಯೆ ಘೃಣಾಖ್ಯಂ ಕರುಣಂ ॥
ಉಪಜಾಹಂ ಭೇದಂ ಹ್ರೀ ।
ತ್ರಪಾಹ್ವಯಂ ವ್ರೀಡೆ ಲಜ್ಜೆ ಯೆನೆ ಮಂದಾಕ್ಷಂ ॥ ೧೯ ॥

ಅಪವಾರಿತಂ ತಿರೋಹಿತ ।
ಮಪಿನದ್ಧಂ ಪಿಹಿತ ಮಾದುದಶ್ರಂ ಕೋಣಂ ॥
ಸ್ವಪನಂ ಸ್ವಾಪಂ ಕ್ಷೌರಂ ।
ವಪನಂ ಮುಂಡನ ಮದಱಿಗೆ ಭದ್ರಾಕರಣಂ ॥ ೨೦ ॥

ಲವ ಮಭಿಲಾವಂ ಲವನಂ ।
ಪವನಂ ನಿಷ್ಪಾವ ಮಂತೆ ಪವ ಮವಲೋಪಂ ॥
ಪ್ರವಿನಾಶ ಮದರ್ಶನ ಮೞಿ ।
ಗೆ ವರ್ಧನಂ ಛೇದನಂ ನಿಕರ್ತನ ನಾಮಂ ॥ ೨೧ ॥

ಆಕ್ಕರ ॥
ಸೂತಿ ಪ್ರಸವನಂ ಪ್ರಸರಂ ವಿಸರ್ಪಣಂ ಸ್ಥಿತಿ ಗತಿ ಪರಿಣಾಮ ಮದು ವಿಕಾರಂ ।
ಸ್ಯೂತಿ ಸೀವನಂ ನಿಷ್ಠ್ಯೂತಿ ನಿಷ್ಠೀವನ ಮಾಸ್ಯಪ್ಲೋಷಂ ಭಿದೆ ಸ್ಫುಟನ ಮಕ್ಕುಂ ॥
ಸಾತಿ ಯದವಸಾನಾರ್ಥಂ ತದ್ವಿಸಂಸ್ಥಿಮಿತ್ಯವಸ್ಥಾಭಿಧಾನಂ ? ।
ಸ್ಖ್ಯಾತಿ ರಕ್ಷಣ ಸ್ಮರಣ ಪರ್ಯಾಯಂ ಸರಪರಾಯಂ ವಿಪತ್ಸಂ? ಯುಗಾಂಕಂ॥೨೨॥

ಕಂ॥ ಉತ್ಕಲಿಕಾ ರತಿ ರಣರಣ ।
ಕೋತ್ಕಂಠಾಯೆಲ್ಲಕಾಖ್ಯ ಮೞಿ ಗೌತ್ಸುಕ್ಯಂ ॥
ಸೋತ್ಕಂಠಂ ಕರ ಮುನ್ಮನ ।
ನುತ್ಕಂ ವಿಮನಸ್ಕ ಮತ್ತ್ರವಳೆ ನವನಕ್ಕುಂ ॥ ೨೩ ॥

ಕಂ॥ ಉರರೀಕರಣಮು ಮೂರೀ ।
ಕರಣಮು ಮಂಗೀಕ್ರಿಯಾರ್ಥಕಂ ನೀಃಪತ್ರಾ ॥
ಕರಣ ಮದಿವ್ಯಥನ? ಮಪಾ ।
ಕರಣಂ ನಿರಸನ ಮುಪಾಶ್ರಯಂ ಸಂಶ್ರಯಣಂ ॥ ೨೪ ॥

ಆದ್ಯಜ್ಞಾನ ಮುಪಜ್ಞೆ ಮ ।
ಹೋದ್ವ್ಯಮ ಮುತ್ಸಾಹವೃತ್ತಿ ಸಂಪನ್ನತೆ ಸಂ ॥
ವೇದ್ಯಂ ವೇದನಿ ಯೆನಿಕುಂ ।
ಚೋದ್ಯ ಮದಾಶ್ಚರ್ಯ ಮದ್ಭುತಂ ಚಿತ್ರಾರ್ಥಂ ॥ ೨೫ ॥

ವಿಸ್ತೀರ್ಣತೆ ತಾನಂತಪ್ಪುದು ।
ವಿಸ್ತಾರಂ ಶಬ್ದವಿಷಯಮಾದಂದಕ್ಕುಂ ॥
ವಿಸ್ತರ ಮೆಂಬೀಶಬ್ದಂ ।
ವಾಸ್ತವ ಮೆಂದಱಿಗೆ ವಸ್ತುತತ್ವಸ್ಥಿತಿಯುಂ ॥ ೨೬ ॥

ಚೇತನೆ ಚೈತನ್ಯಂ [ತಾಂ] ನಿ ।
ರ್ಹೇತುಕ ಮಕ್ಕುಂ ಯದೃಚ್ಛೆ ದಾರ್ಢ್ಯಂ ದ್ರಢಿಮಂ ॥
ಪೀತಿಮ ಮೆನೆ ಪೀತತ್ವಂ ।
ಶ್ವೇತಿಮ ಮದು ಶೌಕ್ಲ್ಯ ಮಸಿತಿಮಂ ಕೃಷ್ಣತ್ವಂ ॥ ೨೭ ॥

ಗರಿಮ ಮದು ತಾಂ ಗುರುತ್ವಂ ।
ಸ್ಥಿರಭಾವಂ ಸ್ಥೇಮ ಮಣಿಮ ಮೆಂಬು ದಣುತ್ವಂ ॥
ವರಿಮ ಮುರುತ್ವಂ ಕ್ರಶಿಮಂ ।
ವರಕೃಶತೆ ಪೃಥುತ್ವ ಮೆಂಬುದಕ್ಕುಂ ಪ್ರಥಿಮಂ ॥ ೨೮ ॥

ದ್ರಾಘಿಮ ಮಕ್ಕುಂ ಪ್ರಾಂಶುತೆ ।
ಲಾಘವ ಮದು ಲಘುತೆ ಬಂಹಿಮಂ ಬಹುಲತ್ವಂ ॥
ಮೋಘತೆ ತಾಂ ವೈಯರ್ಥ್ಯಂ ।
ಶ್ಲಾಘಿಮ ಮೆಂಬುದು ಗುಣಪ್ರಶಂಸಾ ವಚನಂ ॥ ೨೯ ॥

ಕಂ॥ ಜ್ಞಾತಿತ್ವಂ ತಾ ನೆಕ್ಕುಂ ।
ಜ್ಞಾತೇಯಂ ರಾಮಣೀಯಕಂ ರಮ್ಯತ್ವಂ ॥
ಸ್ವಾತಂತ್ರ್ಯಂ ಸ್ವಾಧೀನಂ ।
ಚಾತುರ್ಯಂ ಬಗೆಗೆ ಚಾತುರೀಪರ್ಯಾಯಂ ॥ ೩೦ ॥

ಪರಗಮನಂ ಪಾರಾಯಣ ।
ಪರಾಯಣೋಪಾಖ್ಯ ಮುಱಿಗೆ ಸಾಕಲ್ಯಾರ್ಥಂ ॥
ವಿರಚನೆ ಸಂದರ್ಭಂ ಗ್ರಥ ।
ನೆ [ರೀತಿ]ಗುಂಫನ ಮೆನಿಪ್ಪವೇಕಾರ್ಥಂಗಳ್ ॥ ೩೧ ॥

ಒಂದೊರ್ವರೊಡೆ ನ(ಹಂ)ಕೃತಿ ।
ಯಿಂದಂ ಮಾಡುವುದು ತಾ ನ(ದ)ಹಮಹಮಿಕೆ ಸ್ಥೈ ॥
ತೊಂದಿದ ಮುದದಿಂದುಱಿದೆಸ ।
ಪಂದ ಮಹೋಪುರುಷಿಕಾಸಮಾಖ್ಯಮದೆಕ್ಕುಂ ॥ ೩೨ ॥

ಅವಿತರ್ಕಿತೋಪನತೆ ಮಂ ।
ಥವತರ್ಕನ್ಯಾಯ ಮವಿಕೃಪಾಣೀಯಂ ತಾ ॥
ಅವಱಾದು ದಸವಸಂ ಖ ।
ಲ್ವಬಿಲ್ವಸಮಯುಕ್ತಿ ಕಾಕತಾಳನ್ಯಾಯಂ ॥ ೩೩ ॥

ಉಪೇಂದ್ರ॥ ಅತಾಂತ ವತ್ಯಂತ ಮತೀವ ಬಾಢಂ ।
ನಿತಾಂತ ವತ್ಯರ್ಥ ಮುಳ್ಳಂ ನಿಕಾಮಂ ॥
ಕೃತಂ ಭೃಶಂ ನಿರ್ಭರ ಮೆಂಬಿವೆಲ್ಲಂ ।
ಕೃತಕ್ರಿಯಾಭೂಮವಿಶೇಷಣಂಗಳ್ ॥ ೩೪ ॥

ವಸಂತತಿಲಕಂ॥ ಸಾಮಾನ್ಯವಾಚಿಗಳಭೀತಿಯಿಂದನನ್ಯ ।
ಸಾಮಾನ್ಯಮಾನ್ಯಸುಚರಿತ್ರ ಗುಣಾವತಾರಂ ॥
ಸಾಮಾನ್ಯಮಪ್ಪ ಜನಮುಂ ತಿಳಿವಂತು ಪೇಳ್ದಿಂ ।
ದಾಮೋದರಪ್ರಿಯಸುತಂ ಕವಿಕಂಜಸೂರ್ಯಂ ॥ ೩೫ ॥

ಉ॥ ಸಾರವಿಚಾರಚಂಚುರಮತಿಪ್ರಸರಂ ಪರಿಪಕ್ವಶಾಸ್ತ್ರಸಂ ।
ಸ್ಕಾರ ನುಪೇತಕೌತುಕರಜಂ ವಿದಿತಾಗಮಲೋಕವೃತ್ತಿ ಯುಂ ॥
ತ್ಸಾರಿತಮತ್ಸರಂ ಸುಜನವತ್ಸಳ ನೆಲ್ಲಿಯುಂ ವಿನೂತನೆಂದು ಕೈ ।
ವಾರದೆ ಬಣ್ಣಿಕುಂ ವಿಬುಧಮಂಡಳಿ ಪಂಡಿತನಾಗವರ್ಮನಂ ॥ ೩೬ ॥

—ಗದ್ಯ—

ಇದು ವಿವಿಧಜನವಿನೂತಜಿನಪದಾಂಭೋಜವರಪ್ರಸಾದೋ
ತ್ಪನ್ನಪ್ರಸನ್ನಗಂಭೀರವಚನರಚನಾಚತುರ
ಕವಿತಾಗುಣೋದಯಂ

**ಶ್ರೀ ನಾಗವರ್ಮ**

ವಿರಚಿತಮಪ್ಪ

**ಅಭಿಧಾನವಸ್ತುಕೋಶದೊಳ್**

ಸಾಮಾನ್ಯಕಾಂಡಂ

ದ್ವಿತೀಯಂ



# ಶ್ರೀ ವೀತರಾಗಾಯ ನಮಃ.

ನಮಸ್ಸಿದ್ಧೇಭ್ಯಃ.

ನಾನಾರ್ಥಕಾಂಡಂ

—ತೃತೀಯಂ—

೧ ನಾನಾರ್ಥವರ್ಗಂ



ಕಂ॥ ಪಲವುಂ ಶಬ್ದಂಗಳ್ ಕೇ।
ವಲ ಮಪ್ಪಂತೇಕಶಬ್ದದೊಳ್ ವಿರಚಿಸಿದೆಂ॥
ಪಲವರ್ಥಂಗಳು (ಮಿ) ನ್ನಿ।
ರ್ಮಲ ಮಪ್ಪಂತೇಕಶಬ್ದದೊಳ್ ವಿರಚಿಸುವೆಂ ॥ ೧ ॥

ಜಿನ ರರ್ಹತ್ಸುಗತರ್ ಕಮ।
ಳನಾಭನುಂ ರುದ್ರನುಂ ವೃಷಾಕವಿಗಳ್ ಭ॥
ಗನುಮಬ್ಜಯೋನಿಯುಂ ಶಂ।
ಭುನಾಮಕರ್ ಸುರರು ಮನಿಲನುಂ ಮರುದಾಖ್ಯರ್ ॥ ೨ ॥

ಶಿವೆ ಗೌರಿ ಹರೀತಕಿಯುಂ।
ಶಿವೆ ಯಕ್ಕುಂ ಕೌಶಿಕಾಹ್ವಯಂ ಘೂಕಂ ವಾ॥
ಸವನುಂ ಕೌಶಿಕ ನೆನಿಕುಂ।
ಜವನುಂ ತಾಂ ವಾಯುವೇಗಯುತನುಂ ಯಮನುಂ ॥ ೩ ॥

ಪ್ರಭುವುಂ ದಿನಪತಿಯು ಮಿನರ್।
ಪ್ರಭುವುಂ ತಾರಾಧಿನಾಥನುಂ ರಾಜಾಖ್ಯರ್॥
ಪ್ರಭುವುಂ ಭೂಭೃತ್ತನಯಾ।
ಪ್ರಭೂತನುಂ ಸ್ವಾಮಿಸಂಜ್ಞಕರ್ ತಾವಪ್ಪರ್ ॥ ೪ ॥

ಅವಿ ರವಿಯುಂ ಕುಱಿಯುಂ ಭಾ।
ನು ವಿಲೋಕಮು ಮಂಶುಮಾಳಿಯುಂ ವೃತ್ರಂ ದಾ॥
ನವನುಂ ರಿಪುವುಂ ಶಿಖಿ ತ।
ರುವ ಮಗ್ನಿಯುಂ ಸತ್ಕಾಱು ರುದ್ರನುಂ ಕೀಲಕಮುಂ ॥ ೫ ॥

ಕಂ॥ ಶಲಭಂ ಪತಂಗ ವಿನಸುಂ।
ಜ್ವಲನಂ ತಾಂ ಚಿತ್ರಭಾನು ವಿನನುಂ ಭೂಭೃ॥
ತ್ಕುಲ ಮದ್ರಿನಾಮವಿನಸುಂ।
ಜಲಜಾಕ್ಷಂ ಹಂಸ ವಿನನು ಮೆಂದಱಿಗೆ ಬುಧರ್ ॥ ೬ ॥

ಮ॥ಸ್ರ॥ ಸುರವರ್ಗಂ ಮತ್ಸ್ಯಕ್ಕೆಳಗಂ ಸಂಧಿಸುಗು ಮನಿಮಿಷಾಭಿಖ್ಯೆ ವಿಖ್ಯಾತಿಯಿಂದಂ।
ಗರುಡಂಗಂ ಪಕ್ಷಿಗಳ್ಗಂ ನೆಗಲ್ದು ಮನುಗತಾರ್ಥಂ ಗರುತ್ಮಾಹ್ವವಾದಂ॥
ವರುಣಂಗಂ ಕ್ರೋಷ್ಟುಗಂ ಜಂಬುಕ ನೆನಿಸುವ ಸಂಜ್ಞಾಂತರಂ ತಾನದಕ್ಕುಂ।
ಧರಣೀಧ್ರಂಗಳ್ಗೆ ಮಬ್ಧಪ್ರತತಿಗ(ಮೆಸೆಗುಂ) ಕೂಡೆ ಜೀಮೂತನಾಮಂ ॥ ೭ ॥

ಕಂ॥ ಇಂದ್ರಿಯ ಗಗನಾಂಕಂ ಖಂ।
ಸೇಂದ್ರಂ ಬ್ರಧ್ನಾಹ್ವಯಂ ವಿವಸ್ವದ್ವಚನಂ॥
ಸೌಂದ್ರಂ ಬುಧವಾಚಿ ಘನಂ।
ಚಂದ್ರಂ ಧ್ವನಿ ಸೋಮ ಹೇಮ ನಾಮಕಮಕ್ಕುಂ ॥ ೮ ॥

ಜೈವಾತೃಕ ನೆನೆ ಚಂದ್ರಂ।
ಜೈವಾತೃಕ ನೆನೆ ಚಿರಾಯು ವಪ್ಪನುಮಕ್ಕುಂ॥
ಜೀವನ ಮೆನೆ ಪಾನೀಯಂ।
ಜೀವನ ಮೆನೆ ಜೀವಿತವ್ಯಮುಂ ಮಂತವ್ಯಂ ॥ ೯ ॥

ವೃಂದಾರಕ ಶಬ್ದಂ ನೆಗ।
ೞ್ದಿಂ ದಿವಿಜರೊಳಂ ಪ್ರಧಾನ ನಪ್ಪಾತನೊಳಂ॥
ಸಂಧಂ ಸಲೆ ವಶಗತಿಯೊಳೆ।
ವೊಂದಿದಭಿಪ್ರಾಯದೊಳೆಮನುಸರಿಸಿರ್ಕುಂ ॥ ೧೦ ॥

ಅಹಿಮಾಂಶು ಮೇಘನಾಮಂ।
ಮಿಹಿರಂ ಸೆಂದು ರಸವೆರಡು? ನೀರಾಂಕಂ॥
ದಹನ ಸಿತೇತರ ಪಕ್ಷಂ।
ಬಹುಳಾಖ್ಯಂ ಪ್ರಗ್ರಹಾಂಶು ರಶ್ಮಿ ಸಮಾಹ್ವಂ ॥ ೧೧ ॥

ಕಂ॥ ಪ್ರತಿಬಂಧನವಿಸ್ತಾರ ।
ದ್ವಿತಯಂ ವಿಷ್ಕಂಭ ಮಂತದಕ್ಕುಂ ಬೆಸನಂ ॥
ವ್ಯತಿಷಂಗ ವೆಂಬಿವೆರಡುಂ ।
ವ್ಯತಿಕರಮಕ್ಕುಂ ಬಹುಶ್ರುತೋಕ್ತಿಕ್ರಮದಿಂ ॥ ೧೨ ॥

ಧಾಮಮಂ ನಿವಾಸ ತೇಜೋ ।
ನಾಮಮಂ ಧಿಷ್ಣ್ಯಂ ಗೃಹರ್ಕ್ಷ ಪಾವಕನಾಮಮುಂ ॥
ಧಾಮಮಂ ಪ್ರತೀಪ ಶೋಭನ ।
ನಾಮಮುಂ ಕಾಮಮಂ ಮನೋರಥ ಸ್ಮರನಾಮಮುಂ ॥ ೧೩ ॥

ಸೊದೆ ಯಮೃತಂ ಸೊದೆ ಲೇಪಂ ।
ವಿಧು ದನುಜಾರಾತಿ ವಿಧು ಸುಧಾಸಂಭವನುಂ ॥
ವಧು ಸೊಸೆ ವಧು ಸೀಮಂತಿನಿ ।
ವಿಧಿ ವೇದಂ ವಿಧಿ ವಿಧಾನ ಮಕ್ಕುಂ ಪೆಸರಿಂ ॥ ೧೪ ॥

ಧನಮುಂ ವಿಕ್ರಮಮುಮಂ ದ್ರವಿ ।
ಣ ನಾಮಮಮಾ ರವಿಯು ಮಗ್ನಿಯುಮಂ ಖಗೆಯ ವಿರೋ ॥
ಚನ ಸಂಜ್ಞಕಂಗಳಭ್ಯ ।
ರ್ಚನೆಯುಂ ಮೂಲ್ಯಮು ಮದರ್ಘ್ಯವೆಂದೆನ (ಲ) ಕ್ಕುಂ ॥ ೧೫ ॥

ಖವರಿಸುಗುಂ [illegible] ।
[illegible]ಮಿಂದ್ರನೊಳಂ ॥
ದವದಾವ ಶಬ್ದವೆರಡುಂ ।
ಪ್ರವರ್ತಿಕುಂ ವನದೊಳಂ ವನೋತ್ಥಾಗ್ನಿಯೊಳಂ ॥ ೧೬ ॥

ತರಣಿ ಬಹಿತ್ರಮು ಮಿನನುಂ ।
ಪರಿಗ್ರಹಂ ಪೋಷ್ಯವರ್ಗಮುಂ [illegible] ಕೃತ[illegible]ಮುಂ ॥
ತರುಣಂ ಯುವನುಂ ನವಮುಂ ।
ನರೇಂದ್ರ [ನೆನಲಾಹಿತುಂಡಿಕಂ] ಪಾರ್ಥಿವನುಂ ॥ ೧೭ ॥

ಕಂ॥ ಬಕಕಾಕಯುಗಂ ಧ್ವಾಂಕ್ಷಂ ।
ಶಕುಂತಿ ಚಾ(ಷ)ದ್ವಯಂ ಶಕುಂತೋಪಾಖ್ಯಂ ॥
ಸ್ವಕುಲಪ್ರಧಾನ ಗಜವಾ ।
ಜಿಕುಂಜರಂ ವಿಭು ವೃಷಾಖ್ಯ ಪುಂಗವ ಮಕ್ಕುಂ ॥ ೧೮ ॥

ಚಂ॥ ದಿವ ಮಮರಪ್ರಜಾವಸಥಮುಂ ನಭಮುಂ ಕ್ಷಿತಿ ಭೂಮಿಯುಂ ವಿನಾ ।
ಶವು ಮರಿ ಚಕ್ರಮುಂ ರಿಪುವು ಮಂಬರ ಮಂಶುಕಮುಂ ಸುರಾಧ್ವಮುಂ ॥
ಕವಿ ಸಹ[ಜ] ಪ್ರಸನ್ನಮತಿಯುಂ ಶಿತನುಂ ಬುಧ ರನ್ವಿತರ್ಕಳುಂ ।
ದಿವಿಜರು ಮಂತೆ ಪುಣ್ಯಜನ ರೂರ್ಜಿತಗುಹ್ಯಕರುಂ ನಿಶಾಟರುಂ ॥ ೧೯ ॥

ಕಂ॥ ಲೋಕಂ ಜನಮುಂ ಜಗಮುಂ ।
ನಾಕಂ ದಿವಿಜಾಧಿವಾಸಮುಂ ಘನಪಥಮುಂ ॥
ಶ್ಲೋಕಂ ಯಶಮುಂ ಪದ್ಯಮು ।
ಮೋಕಂ ಸ್ಥಾನಮು ಮಗಾರಮುಂ ತಾನಕ್ಕುಂ ॥ ೨೦ ॥

ಕಂ॥ ಕಕ್ಷಂ [ವೀ]ರುತ್ಕಕ್ಷಂ ।
ನ್ಯಕ್ಷಂ ಕೃತ್ಸ್ನವಕೃಷ್ಟವಾಚಿ ಯದಕ್ಕುಂ ॥
ಪಕ್ಷಂ ಗುಹ್ಯ ಗರುದ್ದ್ವಿಕ ।
ಮೃಕ್ಷಂ ಭಲ್ಲೂಕವಾಚಕಾಭಿಖ್ಯಾನಂ ॥ ೨೧ ॥

ಹ್ರಾದಿನಿ ಮಿಂಚುಂ ಸಿಡಿಲುಂ ।
ಭೇದಂ ಭಿದೆಯುಂ ವಿಶೇಷಮುಂ ಮಿಶ್ರಣಮುಂ ॥
ಸ್ವಾದು ಮನೋಜ್ಞಮು ಮಿನಿದುಂ ।
ಪಾದಂ ತುರ್ಯಾಂಶ ಮಂಘ್ರಿಯುಂ ದೀಧಿತಿಯುಂ ॥ ೨೨ ॥

ಪಾತಾಳಂ ವಡಬಾಗ್ನಿ ರ ।
ಸಾತಳ ಮಂಬೆರಡುಮುಱಿಗೆ ಕಾರಿಕೆ ಕೃತಿಯುಂ ॥
ಯಾತನೆಯುಂ (ತಾ) ಮೆರಡುಂ ।
ಖ್ಯಾತಿ ಶ್ರುತಿದೀಪ್ತಿ ತಾಮೆಯಕ್ಕು ಮಿವೆರಡುಂ ॥ ೨೩ ॥

ಕಂ॥ ತೇಜಮು ಮುತ್ಸವಮುಂ ಮಹ ।
ಮಾಜಿಪರಾಜಯಮು ಮೂರ್ಮಿಯೊದವುಂ ಭಂಗಂ ॥
ಪೂಜೋಪಹಾರ ಮವೆ ಬಲಿ ।
ಭಾಜನ ಮುಪಯೋಗ್ಯಮಪ್ಪುದುಂ ತಾಂ ಪಾತ್ರಂ ॥ ೨೪ ॥

ವೃ॥ ಮರು ಧನ್ವಂ ಮರು ಪರ್ವತಂ ವನ ಮರಣ್ಯಾಖ್ಯಂ ವನಂ ಜೀವನಂ ।
ವರ ಮಿಷ್ಟಂ ವರ ಮುತ್ತಮಂ ನಗ ಮದುರ್ವೀಧ್ರಂ ನಗಂ ಭೂರುಹಂ ॥
ಶರ[ಮೂಷೆ ಶರ] ಮಸ್ತ್ರಸಂಹತಿ ರಸಂ ರಾಗಂ ರಸಂ ತಾಂ ದ್ರವಂ ।
ಶಿರ ಮಗ್ರಂ ಶಿರ ಮುತ್ತಮಾಂಗ ಮಱಿಗಬ್ದಂ ವರ್ಷ ಮಬ್ದಂ ಘನಂ ॥ ೨೫ ॥

ಕಂ॥ ಶರದಾಖ್ಯಂ ಋತುವುಂ ವ ।
ತ್ಸರಮುಂ ಸಾರಂಗ ಮೇಣಮುಂ ಚಾತಕಮುಂ ॥
ಗುರು ಬಿಣ್ಪಿತಪ್ಪುದುಂ ದು ।
ರ್ಧರಮುಂ ದುಂದುಭಿ ಮೃದಂಗಮುಂ ಪಾಸಗೆಯುಂ ॥ ೨೬ ॥

ಆಯಾಮೋತ್ತರಕಾಲ ಮ ।
ದಾಯತಿ ಯೆಂಬುದದೆನಿಕ್ಕು ಮದರಾಭಿ ॥
ಪ್ರಾಯ ಸಮಾಹ್ವಯ ಮಾಶಯ ।
ಮಾಯತನೋದ್ದೇಶಪಾದಪಂ ತಾಂ ಚೈತ್ಯಂ ॥ ೨೭ ॥

ದುರಿತ ಮಪರಾಧ ಮೆಂಬೀ ।
ಯೆರಡು ಮವಾಗಸ್ಸಮಾಖ್ಯೆಯುಂ ತಾಳ್ದಿರ್ಕುಂ ॥
ಪರಿಚಯ ಮಭ್ಯರ್ಥನ ಮೆಂ ।
ಬೆರಡುಂ ಪ್ರಣಯಾರ್ಥವಾಚಿಗಳ್ ತಾನಕ್ಕುಂ ॥ ೨೮ ॥

ಕಷ್ಟ ಮತಿಕೃಛ್ರ ಗಹನಂ ।
ದಿಷ್ಟಂ ತಾ ನೆಱಿಗೆ ಕಾಲದೈವಾಖ್ಯಾನಂ ॥
ರಿಷ್ಟಂ ಪಾಪಾಶುಭದ ಮ ।
ರಿಷ್ಟಂ ಮತ್ತದು ಶುಭಾಶುಭಾತ್ಮಕ ಮಕ್ಕುಂ ॥ ೨೯ ॥

ಕಂ॥ ತ್ರಪು ಸೀಸ.ರಜತ.ನಾಮಂ ।
ಕೃಪೀಟ ಮುದಕ್ಕಾಂ(ಬು)ವಾಚಿ ವಿಟಪಂ ಶಾಖೋ ॥
ಟಿಪಸಂಜ್ಞೆ ಕಕುದ ಮಂತೆದು ।
ನೃಪೇಂದ್ರಚಿಹ್ನ ಪ್ರಧಾನವಾಚಕ ಮಕ್ಕುಂ ॥ ೩೦ ॥

ಸಾಯಕಮಸಿಯುಂ ಶರಮುಂ ।
ಸಾಯಕ ಮಬ್ದಾಭಿಧಾನಮುಂ ವ್ರೀಹಿಯು ಮಾ ॥
ಮ್ನಾಯಂ ಕುಲಮುಂ ಶ್ರುತಿಯುಂ ।
ದಾಯಾದಂ ಪುತ್ರನುಂ ಸಪಿಂಡನು ಮಕ್ಕುಂ ॥ ೩೧ ॥

ಕಲ್ಪಂ ಯುಗಶಿಕ್ಷೆಗಳೊಳ್ ।
ತಲ್ಪಂ ಶಯ್ಯಾಟ್ಟದಾರರೊಳ್ ತರ್ಕಂ ಸಂ ॥
ಕಲ್ಪಾಂಗ.ವಿತರ್ಕದೊಳ್ ಶಸು ।
ಕಲ್ಪಾಪ್ರವಿರಲಾರ್ಥದೊಳ್ ವರ್ತಿಸುಗುಂ ॥ ೩೨ ॥

ಸ್ಥೂಲಂ ಜಡನುಂ ಪಿರಿದುಂ ।
ಜಾಲಂ ಸಲೆ ಮೂರ್ಖ ನಪ್ಪನುಂ ಡಾಂಭಿಕನುಂ ॥
ಮೂಲಂ ಮೊದಲುಂ ಶಿಫೆಯು । ಶಿಫೆಂಬುದು ।
ಶೀಲಂ ಸುಚರಿತ್ರಮುಂ ಸ್ವಭಾವಮು ಮಕ್ಕುಂ ॥ ೩೩ ॥

ವೃ॥ ಕಳೆಧೌತಂ ತಪನೀಯರೂಪ್ಯಯುಗದೊಳ್ ದ್ವಂದ್ವಂ ದ್ವಯದ್ವೇಷದೊಳ್।
ವಿಲಯಂ ನಾಶಯುಗಾಂತದೊಳ್ ಕದಳಿ ರಂಭಾಮೃಜಯಂತ್ಯಾಖ್ಯೆಯೊಳ್ ॥
ಕುಲ ಮನ್ವಾಯ ಸಮೂಹದೊಳ್ ದರ ಮತಿತ್ರಾಸಾಮದಾ ದೇಶದೊಳ್ ।
ಕಲಹಂ ಕೋಶಸಮಿಾಕದೊಳ್ ವಸತಿ ದೋಷಾವಾಸದೊಳ್ ವರ್ತಿಕುಂ ॥ ೩೪ ॥

ಕಂ॥ ಅವದಾತಂ ತಾ ನಮಳಿನ ।
ಮವದಾತಂ ಶುದ್ಧಗೌರವರ್ಣಮು ಮಕ್ಕುಂ ॥
ಪವನಂ ಮಾರುತ ನಾಮಂ ।
ಪವನ ಮೆನಿಕ್ಕುಂ ಕುಳಾಳಪಾಕಸ್ಥಾನಂ ॥ ೩೫ ॥

ಕಂ॥ ಅಭಿಜಾತಂ ತಾಂ ಬುಧನು ।
ಮಭಿವಿನುತೆಕುಳಪ್ರಸೂತನುಂ ಬಗೆಗಱಿವರ್ ॥
ಅಭಿಜನ ಮೆನೆ ಸಲ್ಗುಂ ಜ ।
ನ್ಮಭೂಮಿಯುಂ ಪೆಂಪುವೆತ್ತ ಕುಲದುನ್ನತಿಯುಂ ॥ ೩೬ ॥

ಗಂಧಂ ಲೇಪಾಮೋದಂ ।
ಗಂಧಂ ವನ ಮುತ್ಸಾಹನಪ್ರಕಾಶನವಚನಂ ॥
ಸ್ಕಂಧಂ ವಹತ್ತ್ರಕಾಂಡಂ ।
ಬಂಧುರ ವಾನವ್ರಕಮ್ರ ಪ್ರಾಪತಿಕಳ ಮಕ್ಕುಂ ॥ ೩೭ ॥

ಮಃಸ್ರ॥
ಕರಟಂ ಕಾಕೇಭಗಂಡಸ್ಥಳಿಗಳೆರಡುಂ ಬಾಷ್ಪಮೂಷ್ಮಾಶ್ರುಗಳ್ ತಾ।
ಮೆರಡುಂ ಪ್ರೇಮಪ್ರಮೋದಂ ಪ್ರಣಯ ಮೆರಡು ಮೋಜೋಬಲಂ ದೀಪ್ತಿಯೆಂಬೀ ॥
ಯೆರಡುಂ ದ್ಯುಮ್ನಂ ಧನಂ ವಿಕ್ರಮ ಮೆನಿಪೆರಡುಂ ಹೇತಿ ಶಸ್ತ್ರಾರ್ಚಿ ಯೆಂದಿಂ ।
ತೆರಡುಂ ಜಾಳಂ ಗವಾಕ್ಷಂ ಕಪಟಮುಮೆರಡುಂ ಮೋಜಕಾ? ನಿರುಕ್ತಿ ॥ ೩೮ ॥

ಕಂ॥ ವಲ್ಕಲಮುಂ ಶಕಲಮು ಮವು ।
ಶಲ್ಕಂಗಳ್ ಕಲಿಯ ದಂಭಮುಂ ಕಿಲ್ಮಿಷಮುಂ ॥
ಕಲ್ಕಂ ಗಳಿಗಳುಂ ಕಿಂ ।
ಜಲ್ಕಂಗಳು ಮನ್ತ್ರವಱಿಗೆ ಕೇಸರಸ್ತಂಭಂ ॥ ೩೯ ॥

ಸ್ತಂಭಂ ಜಡತಾ ಸ್ಥೂಣಾ ।
ರ್ಥಂ ಭೂರಿಶ್ರುತಿ ಸುವರ್ಣಬಹುಳಾಖ್ಯಂ ವ್ಯಾ ॥
ಜೃಂಭಂ ವಿಕಾಸಚೇಷ್ಟಾ ।
ರ್ಥಂ ಭದ್ರಮದಕ್ಕು ಮುಖ್ಯ ಕಲ್ಯಾಣಾರ್ಥಂ ॥ ೪೦ ॥

ಅನುವರ್ತನದೊಳ್ ಗಮನದೊ ।
ಳನುಸರಿಕುಂ ಯಾತ್ರೆ ಯೆಂಬ ಶಬ್ದಂ ಪಜ್ಜೆ ॥
ಧ್ವನಿಗೌರವದೊಳಮೊಡನುಂ ।
ದಿನಿಯತಮದ ನೆಗಱ್ದುಮಂತೆ ಪಾಂಕಾರ್ಥದೊಳಂ ? ॥ ೪೧ ॥

ಕಂ॥ ಸರ್ಗಸ್ವಭಾವವಾಚಿ ನಿ ।
ಸರ್ಗಂ ಧನಕನಕವಾಚಕಂ ರೈ ಶಬ್ದಂ ॥
ದುರ್ಗಂ ದುರ್ಗಮ ವಿಪಿನಂ ।
ಮಾರ್ಗಾಕ್ಷಿಪಕ್ಷ್ಮಾಭಿಧಾನ ಮಕ್ಕುಂ ವರ್ತ್ಮಂ ॥ ೪೨ ॥

ತಿಲಚೂರ್ಣಮು ಮಾಮಿಷಮುಂ ।
ಪಲಲಂ ಜಲರಹಿತಮಹಿಯು ಮಾಮಿಷಮುಂ ಜಾಂ ॥
ಗಲಪ್ಪುಂ ಕರ್ಷಚತುಷ್ಟಯ ।
ತುಲನಮು ಮಾಮಿಷಮು ಮೞಗೆ ತಾಂ ಪಲ ಮೆನಿಕುಂ ॥ ೪೩ ॥

ಶಾಣಮದು ನಿಕಷಮುಂ ಪರಿ ।
ಮಾಣಮುಮೆರಡುಂ ಶಿಳೀಮುಖಂ ಷಟ್ಪದಮುಂ ॥
ಬಾಣಮು ಮಂತೆರಡುಂ ನಿ ।
ರ್ವಾಣಂ ನಿರ್ವೃತಿಯು ಮಂತಗಮನ ವಮೆರಡುಂ ॥ ೪೪ ॥

ಅನುಬಂಧ ಪ್ರಾರಬ್ಧದೊ ।
ಳನುವರ್ತಿಯೆನೆ ಗುಣೆಸಕಮುಂ? ದೋಷಮು ಮಿ ॥
ನ್ನನುಭಾವಂ ತೋಜ್ಜ್ವಳೆ ।
ಮನದ ವಿನಿರ್ಣಯಂ...ಪ್ರಭಾವಮುಮಕ್ಕುಂ ॥ ೪೫ ॥

ಅವಸರಮುಂ ವಿಸರಮುಮ ।
ಱವಾರಮಂಬುಪ್ರವಾಹಮು ವೃಂದಮುಮಂ ॥
ತಪ್ಪು ತಾವೋಘಂ ಸಂಘಾ ।
ತಮೊಂದಿದ ಸನ್ನಿವೇಶಮುಂ ಸಂಸ್ತ್ಯಾಯಂ ॥ ೪೬ ॥

ಕಾಲಮು ಮವಧಿಯು ಮೆರಡುಂ ।
ವೇಳಾಭಿಖ್ಯಂ ಕಿರೀಟಮುಂ ಸಂಯುತ ಕೇ ॥
ಶಾಳಿಯು ಮಂತಪ್ಪು ಮೌಳಿ ಕ ।
ರಾಳಂ ದಂತುರಮು(ಮು)ಚ್ಚಮುಂ ತಾನಕ್ಕುಂ ॥ ೪೭ ॥

ಕಂ॥ ಪ್ರಕಟಂ ವಿಶಾಳಮೆಂದು ತಾಂ ।
ವಿಕರಾಳಮು ಮಾ ಸ್ಥಿಯತ್ನಮುಂ ಸಂಕಟಮುಂ ॥
ಶಕುನಂ ನಿಮಿತ್ತಮೆಂಬರೆ ।
ನಿಕಾಯಮುಂ ಕಂಟಕಾಖ್ಯಮರಿಯುಂ ಮುಳ್ಳುಂ ॥ ೪೮ ॥

ಸಾವಭೃತಂ ಸಾವಮಾಸ್ಯಂ ।
ಕೇವಳ ಮೆಂಬುದದೆನಿಕ್ಕು ಮನ್ತವು ನಿಯತಂ ॥
ಕೇವಳಮುಖ್ಯಾನ್ಯತರ ।
ತ್ರ್ಯವಾಚಕ ಮೇಕಶಬ್ದ ಮದು ತಾನಕ್ಕುಂ ॥ ೪೯ ॥

ಮಾಳಿನೀ॥ ಅವನಿರುಹವಿಶಾಳಸ್ಕಂಧದೇಶಂ ಪ್ರಕಾಂಡಂ ।
ಪ್ರವರಗುಣನಿಕಾಯಶ್ಲಾಘ್ಯನುಂ ತಾಂ ಪ್ರಕಾಂಡಂ ॥
ಯುವತಿಜಘನವಸ್ತ್ರಗ್ರಂಥಿ ನೀವೀಸಮಾಖ್ಯಂ ।
ವ್ಯವಹೃತಿಗತಮೂಲದ್ರವ್ಯಮುಂ ನೀವಿ ಯಕ್ಕುಂ ॥ ೫೦ ॥

ಕಂ॥ ರಾಗಂ ಮುದಮುಂ ಕೆಂಪುಂ ।
ಯೋಗಂ ಧ್ಯಾನೋಪ ಯೋಗಮುಂ ಸಂಗತಿಯುಂ ॥
ಪೂಗಂ ವ್ರಜಮುಂ ಕೌಂಗುಂ ।
ವೇಗಂ ಜವಮುಂ ಜಲಪ್ರವಾಹಮು ಮಕ್ಕುಂ ॥ ೫೧ ॥

ಸಾರಮದುತ್ಕೃಷ್ಟಬಲಂ ।
ಸಾರಂ ನ್ಯಾಯಾನಪೇತಮುಂ ತಾನಕ್ಕುಂ ॥
ಸಾರದ (ಮೆ)ನಿಕು ಮಧೃಷ್ಟಂ ।
ಸಾರದ ಮಕ್ಕುಂವಿಶುದ್ಧಮುಂ ಮುನಿಮತಮುಂ ॥ ೫೨ ॥

ತರಳಂ ಚಂಚಲ ರೂಪಂ ।
ತರಳಂ ಹಾರೋಪನದ್ಧಮಧ್ಯಮರತ್ನಂ ॥
ಸರಳಂ ಋಜುಸ್ವಭಾವಂ ।
ಸರಳಂ ಭೂರುಹವಿಶೇಷವಚನಮದಕ್ಕುಂ ॥ ೫೩ ॥

ಕಂ॥ ಕೀಲಕಸಂಭೃತ ಮವಟು ಕು ।
ಕೂಲಂ ತುಷವಹ್ನಿಯುಂ ಕುಕೂಳ ಮೆನಿಕ್ಕುಂ ॥
ಕೂಲಂ ಸಂಯೋಗಾರ್ಥನಿ ।
ಕಾಳಿನ. ಮವರ್ಣವರ್ಣಮುಂ? ತಾನಕ್ಕುಂ ॥ ೫೪ ॥

ಆರ್ತಿ ಮನಃಪೀಡಾಟನಿ ।
ವಾರ್ತಂ ನೀರೋಗ ಫಲ್ಗು ವಾರ್ತಮು ಮಕ್ಕುಂ ॥
ಮೂರ್ತಿ ಘನ ಕಠಿನವೆರಡೆಂ ।
ವಾರ್ತೆ ಜನಶ್ರುತಿಯು ಮನ್ತ್ರ ದಾಜೀವನಮುಂ ॥ ೫೫ ॥

ಆಶೀಶ್ಶಬ್ದ ಮದಿಷ್ಟಾ ।
ರ್ಥಾಶಂಸನಮುಂ ಭು(ಜಂ)ಗದಂ(ಷ್ಟ್ರಮು)ಮಕ್ಕುಂ ॥
ನಾ.ಶ...ಪದಾನಪ್ಯಾಪ ।
ದೇಶಮು ಮರ್ಥಾಪಗಮ ಮದುಂ ತಾನಕ್ಕುಂ ॥ ೫೬ ॥

ವಿದ್ಧಂ ಸೂಚ್ಯಾಭಿಮುಖಾ ।
ಯುದ್ಧಂ ಸಾದೃಶ್ಯಮಪ್ಪುದುಂ ತಾಂ ವಿದ್ಧ ॥
ಖದ್ಧಂ ಸಿತ ವೆನಿಕುಂ ಸಂ ।
ಶುದ್ಧೋ[ಪಳಕಾ] ಶವರ್ಣಮಪ್ಪುದುಂ ಸಿತ ವೆನಿಕುಂ ॥ ೫೭ ॥

ಮ॥ಸ್ರ॥ ಸಲಿಲಕ್ಕಂ ಪಾಲ್ಗವೆತ್ತಂ ಖವರಿಪುವು ಪಯಸ್ಸಂಜ್ಞೆ ಬಾಲ್ಯಾದ್ಯವಸ್ಥಾ ।
ವಲಿಗಂ ಪಕ್ಷಿವ್ರಜಕ್ಕಂ ಖಗೆಗಳ ವಯಸಾ(ಭಿಖ್ಯೆ)ಯುಂ ಸಾನುಗಳ್ಗಂ ॥
ವಲಯಕ್ಕಂತೋರ್ಪ್ರವೋರಂತಿರೆ ಕಟಕಸಮಾಭಿಖ್ಯೆಯುಂ ಜಾತಕೌತೂ।
ಹಲಕಂ ಕಲ್ಯಾಣಕಾರ್ಯಪ್ರತತಿಗ ವಮರ್ಗುಂ ಕೌತುಕೋನ್ನಾಮ
ಧೇಯಂ ॥ ೫೮ ॥

ಕಂ॥ ಯಾಚಕವರ್ಗಕ್ಕಂ ನಾ ।
ರಾಚಕ್ಕಂ ಮಾರ್ಗಣಾಂಕ [ಮದು ರಾಷ್ಟ್ರಕ್ಕಂ] ॥
ಗೋಚರದೆಡೆಗಂ ವಿಷಯಂ ।
ವಾಚಕವೆಂದಱಿಗೆ ವಸ್ತುತತ್ವಸ್ಥಿತಿಯಿಂ ॥ ೫೯ ॥

ಕಂ ನಗರ ವಣಿಕ್ಪಥ ನಾಮಂ ।
ನಿಗಮಂ ಪರ್ಯಾಸಿಕಾಖ್ಯೆಯೊ[ಳ್ ಶಯನದೊಳಂ] ॥
ನೆಗಳ್ದಿರ್ಗ್ಗಂ ಪರ್ಯಂಕಾಖ್ಯಂ ।
ಭಗಶಬ್ದಂ ಜ್ಞಾನ ಯೋನಿ ಯತ್ನೇಪಾಖ್ಯಂ ॥ ೬೦ ॥

ಸಲೆ ವಲ್ಲವನಾಮಂ ಗೋ ।
ಕುಲಪಾಲನು ಮಂತೆ ಸೂದನುಂ ವಲ್ಲಭ ನೊ ॥
ಲ್ದೊಲಿಸಿದನುಂ ಪತಿಯುಂ ಕೇ ।
ವಲಂ ದಿವಾಕೀರ್ತಿ ಪೊಲೆಯನುಂ ನಾಪಿತನುಂ ॥ ೬೧ ॥

ಅನುಕೂಲಂ ಸರಳ ನೆನಿ ।
ಪ್ಪನಂತೆವಂ ದಕ್ಷಿಣಂ ಕರಂ ದಕ್ಷ ನರೋ ॥
ಗ ನೆನಿಪ್ಪವನಱಿಗುಂಟು ? ।
ವನಾರತಂ ದಾನಿ ಪಿರಿಯನೆನಿಪ[ನುದಾ]ರಂ ॥ ೬೨ ॥

ಅವಧೂಮಕ್ಷ್ಣಣಂ ಕಪ ।
ಟವೃತ್ತಿಯಪ್ಪವನ ಮಱಿಗೆ ಕರ್ಕೋಟಕನುಂ ॥
ಖವರಿಸೆ ಭಾವಜ್ಞನು ಮಲ ।
ಸುವನುಮ(ಣಂ) ಲೋಕಿಂತಾಹ್ವಯಂ ತಾನಪ್ಪರ್ ॥ ೬೩ ॥

ಅವಧಿಯೆನಿಕ್ಕುಂ ಸೀಮೆಯು ।
ಮವಧಿಸ್ಥಾನಮು ಮಗಾಧ ಮೆಂಬುದೆನಿಕ್ಕುಂ ॥
......ವತಲಸ್ಪರ್ಶಮು ।
ಮವಘೆ ವೆನಿಕ್ಕುಂ ಕ್ರಿಷ್ಣಮು ಕಲ್ಮಷಮುಂ ॥ ೬೪ ॥

ಚಂ॥ ಮಳೆಮುಘಮುಂ ಪೊದಱಿರ್ದ್ದಗೆದ ಕಿಟ್ಟಮು ಮರ್ಚಿ ಶಿಖಾಳಿಯುಂ ಕರಾ।
ವಳಿಗಳು ಮಭ್ರ ಮಬ್ಧಪಥಮುಂ ಘನಮುಂ ನವಿಶುದ್ಧವಪ್ಪುವು ॥
ಜ್ವಳನಮು ಮರ್ಕ, ಮಶ್ವಮು ಮವಪ್ಪುಗಿವಂಶು ಮಯೂಖಮುಂ ಮಹೋ।
ತ್ಸಳಸಬನುಂ ಚಿರಂಟಿಕೆ ಸುವಾಸಿನಿ ಯಪ್ಪವಳುಂ ವಯಸ್ಥೆಯುಂ ॥ ೬೫ ॥

ಕಂ॥ ಆಳಿ ಸಖಿಯುಂ ಪೊದಟಿಡ್ಡಿಸೆ ।
ವಾಳಿಯು ಮಾಲೋಕಮುಖಕ್ಕೆ ಬೆಳಗುಂ ದ್ಯುತಿಯುಂ ॥
ಲೋಳಂ ಚಲಮು ಮತಿಸ್ಪೃಹೆ ।
ಯಾಳಿಪು ಮುತಾತ್ಮಾಳೆ ಮುಚ್ಚ್ವಮುಂ ದಂತುರಮುಂ ॥ ೬೬ ॥

···ಕಾಚಮದು ರಹಸ್ಯ ।
ಪ್ರಕಾಶ್ಯ ದ್ವಿತಯವಾಚಿ ಹೇಳಾಶ್ರುತಿ ಬಿ॥
ಬ್ಬೋಕಾವಧೀರಣಾರ್ಥಮ ।
ಳೀಕ ವದನ್ಯತಾಪ್ರಿಯಾಭಿಧಾನ ಮುಮಕ್ಕುಂ ॥ ೬೭ ॥

ಘಳದುರ್ವಿದ ತುಷ ಧಾನ್ಯಾ ।
ವಳಿ ಭಕ್ತಿಸಿಕ್ಥಕಂ ಮಿವೆ ಪುಲಾಕಾಖ್ಯಂಗಳ್ ॥
ಪುಳಕ ಮೆನಿಕ್ಕುಂ ರತುನೋ ।
ಪಳಮುಂ ತಾಮಪ್ರ ವೃಷ್ಟಿಯುಂ ಕೀಟಕಮುಂ ॥ ೬೮ ॥

ನರಘಾ ನಿದಿಗ್ಧಿಕಾಹ್ವಯ ।
ಮೆರಡುಂ ಕ್ಷುದ್ರಾಭಿಧಾನ ವಿಷಮುಂ[ಸಿಂಹ] ॥
ಸ್ವರಮುಂ ಕ್ಷ್ವೇಡಾಂಕಂಗಳ್ ।
ಸ್ಮರನುಂ ಪುಣಸುಂ ಸಮಂತು ಮದನಾಖ್ಯಂಗಳ್ ॥ ೬೯ ॥

ಜ್ಯಾವಚನಂ ಭೂಮಿ ಧನು ।
ರ್ಜೀವಾರ್ಥಕ ಪರ್ಯಶಬ್ದ ಮದು ತಾನಕ್ಕುಂ ॥
ಕೇವಳವಿಭುವಾಶಾರ್ಥಂ ।
ಭಾವ ಮಭಿಪ್ರಾಯ ಯೋನಿ ಸತ್ತಾತ್ಮಾರ್ಥಂ ॥ ೭೦ ॥

ಅಕ್ಕರ॥ ಜಾತಿ ಸಾಮಾನ್ಯ ಮಾಳತಿವಾಚಕಂ ಚಿತ್ರ ಮದ್ಭುತಾಲೇಖ್ಯ ನಾಮಂ ।
ಭೂತಿ ಸಂಪತ್ತಿ ಭಸಿತ ಪ್ರತ್ಯಾಯನಂ ಧರ್ಮಂಗುಣಸ್ವಭಾವವಾಚಿ ॥
ಸಾತಿ ದಾನಾವಸಾನಾರ್ಥ ಮಂತದುಂ ಸಂಸ್ಥೆ ಮೃತ್ಯುವ್ಯವಸ್ಥಾಭಿಧಾನಂ ।
ಖ್ಯಾತಿ ರಕ್ಷೆ (ಣ)ಸ್ಮರಣ ಪರ್ಯಾಯಂ ಸಂಪರಾಯಂ ವಿಪತ್ಸಂಯು ॥
ಗಾಖ್ಯಂ ॥ ೭೧ ॥

ಕಂ॥ ಇಷ್ಟಿ ಮಖೇಚ್ಛಾವಚನಂ ।
ದೃಷ್ಟಿ ವಿಳೋಚನ ವಿಚಾರ ದರ್ಶನ ವಚನಂ ॥
ವಿಷ್ಟಿ ಫಲಸಸ್ಯವಚನಂ ।
ದಿಷ್ಟಿ ಸುಖಾನಂದ ದೈವ ವಚನವುದಕ್ಕುಂ ॥ ೨೨ ॥

ಭೋಗಂ ವಿಷಯಾನುಭವಂ ।
ಭೋಗಂ ನಾಗನ ಶರೀರಮುಂ ತತ್ಫಣಮುಂ ॥
ನಾಗಂ ಪ್ರಧಾನಭೂತಂ ।
ನಾಗಂ ಭೂರುಹವಿಶೇಷಮುಂ ಕುಂಜರಮುಂ ॥ ೨೩ ॥

(ಕ)ರಿವರ ಗರ್ಜ್ಜಿತ ತೂರ್ಯ ।
ಸ್ವರಮುಂ ಸಂರಂಭಮುಂ? ಪೆಸರ್ಚಲ್ಕಾ ॥
ತೆರವೆನೆ ಪಡೆಗುಂ ಪಾವಿನ ।
ಸುರಿದೆರೆಯುಂ ಚೋಳಕಮು ಮಱಿಗೆ ಕಂಚುಕ ಮಕ್ಕುಂ ॥ ೨೪ ॥

ಪೀಲು ಪಿನ ದ್ವಿರದಾಂಕಂ ।
ಸಾಲಂ ಪ್ರಾಕಾರ ಸರ್ಜ್ಜತರುನಾಮಂ ಕೀ ॥
ಲಾಲ ಮಸೃಕ್ಸಲಿಲಯುಗಂ ।
ವ್ಯಾಲಂ ಶ್ವಾಪದ ಭುಜಂಗಮುಂ ಕ್ರೂರಾರ್ಥಂ ॥ ೨೫ ॥

ಸಾಲಾವೃಕಾಹ್ವಯಂ ಶ್ವ ಸೃ ।
ಗಾಲ ಪ್ಲವಗಂಗಳೊಳ್ ಪ್ಲವಂಗಮುಶಬ್ದಂ ॥
ನಾಳೀಜಂಘಾಖ್ಯೆಯೊಳಂ ।
ಶಾಲೂರದೊಳಂ ಯಥಾರ್ಥಕಂ ವರ್ತಿಸುಗುಂ ॥ ೨೬ ॥

ಶಂಕಾರುಕ್ತ್ರಾಪದೊಳಾ ।
ತಂಕ ಮದುತ್ಸಂಗ ನಾಮ ಚಿಹ್ನಾಖ್ಯೆಯೊಳಂ ॥
ಅಂಕಮೆದಾದಿ ಪುರೋಂಶ ವಿ ।
ಟಂಕಂಗಳೊಳಗ್ರಶಬ್ದವಂ ನಿಗದಿಸುವರ್ ॥ ೨೭ ॥

ಕಂ॥ ನಿರುತಂ ಪ್ರಧಾನ ಭೇಷಜ ।
ಪರಿಕರ ಸಿದ್ಧಾಂತ ವಾಚಕಂ ತಾ ನಕ್ಕುಂ ॥
ಪರಿಸಂಖ್ಯೆಯಶೋಕಂ ತಾಂ ।
ಪರಿಗ್ರಹಂ ಶಾಸ್ತ್ರಮೆಂಬುದಕ್ಕುಂ ಗ್ರಂಥಂ ॥ ೭೮ ॥

ಭಯಮುಂ ಭೀಕರಮುಂ ಪ್ರತಿ ।
ಭಯ ಮೆನಿಕುಂ ಶಪಥಹೇತುವಿಶ್ವಾಸಂ ಪ್ರ ॥
ತ್ಯಯ ಮೆಂಬುದಕ್ಕುಮಱಿಗವೆ ।
ನಯಮುಂ ಶೀಲಮು ಮನೂಕವಾಚ್ಯ ಮವೆರಡುಂ ॥ ೭೯ ॥

ಕೇತುಪತಾಕಾ ಚಿಹ್ನೇ ।
ತ್ಪಾತಂ ರಾಷ್ಟ್ರಕವಜನ್ಮಮುಂ ಕುಲಜನಮುಂ ॥
ಹೇತು ನಿದಾನಂ ಬೀಜಂ ।
ಮಾತಂಗಂ ಶ್ವಪಚನುಂ ಕರೇಣು ವುಮಕ್ಕುಂ ॥ ೮೦ ॥

[ವೃಜಿನಂ ಕೇಶ ಮೆನಿಕ್ಕುಂ] ।
ವೃಜಿನಂ ಕ್ಲೇಶಾಘ ವ[ಕ್ರ]ವಾಚಿಯು ಮಕ್ಕುಂ ॥
ನಿಜ ಮಾತ್ಮೀಯಂ ಸತ್ಯಂ ।
ದ್ವಿಜಾಹ್ವಯಂ ದಂತ ವಿಪ್ರ ವಿಹಗ ಪ್ರಕರಂ ॥ ೮೧ ॥

ಕ್ರತು ಕೋಪಂ ಬಾಷ್ಪಾಂಬು ।
ಪ್ರತಿರೋಧಂ ಮನ್ಯು ಶಬ್ದವಾಚಿ ಯುದಕ್ಕುಂ ॥
ಕ್ಷಿತಿರುಹಮೂಲ ಗುಣಾಕ್ಷಿ ।
ತ್ರಿತಯದೊಳಂ ನೇತ್ರಮೆಂಬು ದಕ್ಕುಂ ನಾಮಂ ॥ ೮೨ ॥

ಉಪೇಂದ್ರವಜ್ರಂ॥ ಅಭಿಖ್ಯೆ ಯೆಂದಿಂತಿದು ನಾಮ ಕೀರ್ತಿ ।
ಶುಭಾಸಮಾಖ್ಯಾತಿಯನುಂತು ಮಾೞ್ಕುಂ ॥
ವಿಭೂತಿಪದ್ಮಾವಸ(ದೇ) ವಿಕಾಮ ।
ಶುಭಾವಹಂ ಶ್ರೀ ಶ್ರುತಿ ತಾ ನದಕ್ಕುಂ ॥ ೮೩ ॥

ಕಂ॥ (ಪ್ರ)ಕೃತಿ ಮನೋಹರ ಧರ್ಮ ।
ಪ್ರಕಟನ ಪರಮಱಿಗೆ ಪುಣ್ಯವೆಂದಿಂತಿದು ಮೂ ॥
ಷಕ ಧರ್ಮ ಶ್ರೇಷ್ಠಾರ್ಥ ।
ಪ್ರಕಾಶಕಂ ಕವಿವಚೋಕ್ತಿ(ಯಿಂ) ವೃಷಶಬ್ದಂ ॥ ೮-೪ ॥

ತುರಗಂ ಗಾಯನರಂಬರ ।
ಚರರೆನೆ ಗಂಧರ್ವವಾಚಿ ಶಬ್ದಮತೀವ ॥
ತ್ವರಿತಂ ವಿಭೂತಿ ಪರವಾ ।
ದರ ಮೆಂಬಿವು ಸಂಭ್ರಮಾಭಿಧಾಯಕ ಮಕ್ಕುಂ ॥ ೮-೫ ॥

ಪೂವಿಂಗಂ ಮಾಲತಿಗಂ ।
ದೇವರ್ಕಳ್ಗಂ ಸಮಂತು ಸುಮನೋನಾಮಂ ॥
ತಾವರೆಗಂ ಕರಿಗಂ ವ್ಯಾ ।
ಘ್ರಾವಳಿಗಂ ಪುಂಡರೀಕ ಮೆಂಬಭಿಧಾನಂ ॥ ೮-೬ ॥

ಅಂತರ್ಗೃಹಂ ಕುಸೂಲಗೃ ।
ಹಾಂತರ್ದೇಶಂಗಳೆಱಿಗೆ ಕೋಷ್ಠ ಮದಕ್ಕುಂ ॥
ಧ್ವಾಂತಂಪ್ರಧಾನಭೂತ ಗು ।
ಣಾಂತರ ರಾಹುತ್ರಯಂ ತಮೋಭಿಖ್ಯಾನಂ ॥ ೮-೭ ॥

ದ್ಯೂತಾಕ್ಷ ಶಾರಿಫಳಕಾ ।
ಖ್ಯಾತಿಪರಂ ತಾ ನದಕ್ಕುಮಂತಾಕರ್ಷಂ ॥
ದ್ಯೂತಕರಂ ದ್ಯೂತಪಣಂ ।
ದ್ಯೂತ ಮೆನಿಪ್ಪುವು [1]ದುರೋದರೋಪಾಖ್ಯಾನಂ ॥ ೮-೮ ॥

ಭೂತೇಂದ್ರಿಯಾರ್ಥಶಬ್ದ ।
ವ್ರಾತದೊಳಂ ಗ್ರಾಮ ಶಬ್ದಮಂತದು ನೆಗೞ್ಗುಂ ॥
ಚೈತನ್ಯ ಸಮಾಖ್ಯಾ ಸಂ ।
ಕೇತತ್ರಿತಯಕ್ಕೆ ಸಂಜ್ಞೆಯಂತದು ನಾಮಂ ॥ ೮-೯ ॥

---

[1] ಧರೋದರವೆಂದ್ಯೂ ಪಾಠವುಂಟೆಂದು ಗುರುಬಾಲ ಪ್ರಬೋಧಿಕೆಯಲ್ಲಿದೆ.

ಕಂ॥ ಗೋತ್ರಂ ನಾವೂದ್ರಿ ಕುಲಂ ।
ಕ್ಷೇತ್ರಂ ಕೇದಾರ ದಾರ ದೇಹತ್ರಿತಯಂ ॥
ಪತ್ರಂ ವಾಹನ ಹೇತಿ ಪ ।
ತತ್ರಂ ಸತ್ರಂ ಮಖಾಟವೀ ಸಂವ್ಯಾನಂ ॥ ೯೦ ॥[1]

ದ್ರವಿಣಾತ್ಮಾತ್ಮೀಯಾರ್ಥಂ ।
ಸ್ವ ವಚನವೆಂದಱಿದುಕೊಳ್ಗೆ ತದ್ವಜ್ಞರ್ ಕಾಂಚೀ ॥
ಭವನಪ್ರಕೋಷ್ಠ [ಗಜ] ಮ ।
ಧ್ಯ[ವ]ರತ್ರಾ [ವಾಚಿ]ಯೆಱಗೆ ಕಕ್ಷ್ಯಾಶಬ್ದಂ ॥ ೯೧ ॥

ಕೃಪಣಾಲ್ಪಕ್ರೂರಾರ್ಥ ।
ವ್ಯಪದೇಶಂ ಕ್ಷುದ್ರಶಬ್ದ ವಾಹ [ವ ಸಂ] ವಿ ॥
ದ್ವಿಪದಾಖ್ಯಾನಂ ಸಂಗರ ।
ಮುಪಾಯ ಲಪನಾದಿ ವಾಚಕಂ ಮುಖ ಮಕ್ಕುಂ ॥ ೯೨ ॥

ಅತ್ಯಯ ಮೆಂಬುದು ಕೃಚ್ಛ್ರನಿ ।
ವೃತ್ಯಪಗ[ಮ] ದೋ[ಷ ಡೆಂಡೆನಾಮ] ಕ ಮಕ್ಕುಂ ॥
ಸತ್ಯೋಕ್ತಿ ವಿದ್ಯಮಾನ ।
ಸ್ತುತ್ಯರ್ಥಪ್ರತಿ ನಿರೂಪಣಂ ಸಚ್ಛಬ್ದಂ ॥ ೯೩ ॥

ಮ॥ ಸ್ರ॥
ಇಳೆ ಯಕ್ಕುಂ ಪೃಥ್ವಿಯುಂ ವಾಣಿಯು ವಿಳೆಯನಿಕುಂ ದೇವತಾನಿಂತಿದಾಖ್ಯಂ।
ಬಳ ಮಂಗಸ್ಥೌಳವಾಚ್ಯಂ ಬಳ ಮಲಘುತರಂ ಸೈನ್ಯ [ಮುಂತಾಂ]ಬಳಾಖ್ಯಂ ॥
ಕಳೆಯಕ್ಕುಂ ಚಂದ್ರನಂಶಂ ಕಳೆ ಪರಿಕಳಿತಂ ಪೃಥ್ವಿ ಸಿಲ್ಪಂ ಬುದಾಖ್ಯಂ ।
ತಳೆನಾಮಂ ಮತ್ತನೂರ್ಥಂ ತಳಮಱಗೆ ಚಪೇಟಂ [ತಳೆಂ]ಗೋಧಿಕಾಖ್ಯಂ ॥
॥ ೯೪ ॥

[1] ಮೂಲದಲ್ಲಿ ಇಲ್ಲಿಗೆ ೩೦೫ ಪದ್ಯ ಎಂದಿದೆ.

ಕಂ॥ ಪಳೆ ಮೆಂತದಸ್ತ್ರಶಲ್ಯಂ ।
ಪಳೆ ಮಕ್ಕುಂ ವೃಷ್ಟಿ ಪಳೆ ಮೆನಿಕ್ಕುಂ ಲೋಭಂ ॥
ತುಳಿಯೆಂಬುದು ವೇಶ್ಮಾಂಗಂ ।
ತುಳಿ ಸಾದೃಶ್ಯಂ ತುಳಾಭಿಧಾನಂ ಮಾನಂ ॥ ೯೫ ॥

ಅಧರಂ ಹೀನಸಮಾಹ್ವಯ ।
ಮಧರ ಮಧೋಭಾಗ ಮಧರ ಮೋಷ್ಠಮು ಮಕ್ಕುಂ ॥
ಮಧು ಮಕರಂದೋತ್ಥರಸಂ ।
ಮಧು ದಾನವನಾಮಮಱಿಗೆ ಮಧು ಮಾದ್ವೀಕಂ ॥ ೯೬ ॥

ಕೂಟಂ ಪುಂಜೀಭೂತಂ ।
ಕೂಟಂ ಶೈಳಾಗ್ರಸಾನು ಕೂಟಂ ಕಪಟಂ ॥
ಖೇಟಂ ತಾಂ ಖಗವಚನಂ ।
ಖೇಟಂ [1] ಪುರ [ಭೇದ]ವಾಚಿ ಖೇಟಂ ನಿತ್ಯಂ ॥ ೯೭ ॥

ಸಾಧನ ಮೆನೆ ಸೇನಾಂಗಂ ।
ಸಾಧನ ಮೆನೆ ಸಿದ್ಧಸಾಧನಂ ತಾಂ ಕರಣಂ ॥
ಮಾಧವ ಮೆಸೆವ ವಸಂತಂ ।
ಮಾಧವ ನಸುರಾರಿ ಮಾಧವಂ ವೈಶಾಖಂ ॥ ೯೮ ॥

ಅಂಧಂ ಜಡ ನಂಧಂ ತಮ ।
ಮಂಧಂ ದೃಷ್ಟಿವ್ಯಪೇತನುಂ ತಾ ನಕ್ಕುಂ ॥
ಸೈಂಧವ ಮಶ್ವಂ ಲವಣಂ ।
ಸೈಂಧವಮುಂ ಶೂಕಮು ಮಂತೆ ಸೈಂಧವ ಮಕ್ಕುಂ ॥ ೯೯ ॥

ಕೋಶಂ ಖಡ್ಗಪಿಧಾನಂ ।
ಕೋಶಂ ನೀರೇಜಕುಟ್ಮಳಾಖ್ಯೆಯು ಮಕ್ಕುಂ ॥
ಕೋಶಂ ದಿವ್ಯವಿಶೇಷಂ ।
ಕೋಶ ಮಶೇಷಾರ್ಥನಿಚಯವಾಚಿಯು ಮಕ್ಕುಂ ॥ ೧೦೦ ॥

---

[1] ಪುರವಾಚಿಯುಮಕ್ಕು ಮಸಿಯುಂ ಖೇಟಂ.

ಕಂ। ಸುರಭಿ ಸುಗಂಧದ್ರವ್ಯಂ ।
ಸುರಭಿ [ಗ್ರೀಷ್ಮರ್ತು]ಸುರಭಿ ಸರ್ವಮನೋಜ್ಞಂ ॥
ಸುರಭಿ ಸುರಧೇನು ವೆಂದಭಿ ।
ನಿರೂಪಣಂ ಗೆಯ್ವರೆರಮೆ ಶಬ್ದಾಗಮಿಕರ್ ॥ ೧೧೦ ॥

ಕರ ಮೆಂಬುದು ಸಿದ್ಧಾಯಂ ।
ಕರ ಮೆಂಬುದುದಗ್ರದೀಪ್ತಿ ಕರ ಮೆಂಬುದು ಕೆಯ್ ॥
ಕರ ಮೆಂಬುದು (ದ್ವಿರದಕರಂ) ।
ಪರಿಭಾವಿಪುದಿಂತಿದಂ ಪ್ರಯೋಗಾಂತರದಿಂ ॥ ೧೧೨ ॥

ರವಿಯೊಳ್ ಮೃಗಾಂಕನೊಳ್ ವಿ ।
ಷ್ಣುವಿನೊಳ್ ಶಕ್ರನೊ[ಳಹೀಂದ್ರ]ನೊಳ್ ಹಯದೊಳ್ ವಾ ॥
ಯುವಿನೊಳ್ ಶುಕದೊಳ್ ಜವನೊಳ್ ।
ಪ್ಲವಂಗದೊಳ್ ನೆಗಟ್ದುವಾವಗಂ ಹರಿಶಬ್ದಂ ॥ ೧೧೩ ॥

ವಸುಧೆ ದಿವಂ ಪವಿ ದೀಧಿತಿ ।
ದೆಸೆ ಬಾಣಂ ವಾರಿ ವಾಣಿ ಲೋಮಂ ನಯನಂ ॥
ಪಸು ವೆಂಬಿನಿತೆಟಿಕೊಳಂ ವ ।
ರ್ತಿಸುಗುಂ ಗೋ ಶಬ್ದಮೆಟಿಗೆ ಶಬ್ದವಿದರ್ಕಳ್ ॥ ೧೧೪ ॥

ಮಾಲಿನೀ॥ ಅವಸರ ಶರ ಕುತ್ಸಾ ವಾರ ವಾ ವ್ಯಾಜ ಕಾಂಡಂ ।
ಪವನಜ[ಲಜ]ಜಾತಾಂಭಃ ಶಿರೋಕ್ತಂ ಕಶಬ್ದಂ ॥
ಭವಸುಖ ಶುಭಮೋಕ್ಷಾರ್ಥಂ ಶಿವಂ ತಾ ನದಕ್ಕುಂ ।
ದ್ರವಿಣ ದಿವಿಜ ಭೇದಾಂ ಶೂತ್ಕರಂ ವಸ್ವಭಿಖ್ಯಂ ॥ ೧೧೫ ॥

ಕಂ॥ ಪ್ರೇಕ್ಷಾ ಶಬ್ದಂ ವೃತ್ತಿನಿ ।
ರೀಕ್ಷಣ ಬುದ್ಧಿ ಪ್ರಕರ್ಷಸಂಜ್ಞೆಯುಮಕ್ಕುಂ ॥
ಸಾಕ್ಷಾದ್ವ್ಯಜನಂ ಬಗೆಯೆ ಸ ।
ದೃಕ್ಷ ಪ್ರತ್ಯಕ್ಷ ವಾಚಕಂ ತಾ ನಕ್ಕುಂ ॥ ೧೧೬ ॥

ಕಂ। ಆಶೀರ್ಮಂಗಳೆ ಸುಖ ನಿ ।
ರ್ದೇಶಕರಂ ಸ್ವಸ್ತಿ ಸಾಮಿ ದರ ಕುತ್ಸಿತ ವಾ ॥
ತ್ವಾಪಶಾಂಕವಿಡಾರ್ಥಂ? ।
ವಾ ಶಬ್ದಮದುಪಮೆಯುಂ ವಿಕಲ್ಪಮು ಮಕ್ಕುಂ ॥ ೧೦೭ ॥

ಆದಂ ಭರ್ತ್ಸನ ಕುತ್ಸಾ ।
ರ್ಥೋದಿತಮಕ್ಕುಂ ಧಿಗುಕ್ತಿ ಬೃಶಸಂಯುತಸಂ ॥
ಪಾದನಮಕ್ಕುಂ ಹಿ ಪದಂ ।
ಪ್ರಾದುಶ್ಶಬ್ದಂ ಪ್ರಕಾಶಸಂಭವ ವಚನಂ ॥ ೧೦೮ ॥

ಭೂಷಣಪರ್ಯಾಪ್ತಿಯೊಳಲ ।
ವಿಾಮತ್ಸೀವಾಭಿವಿಧಿಯೊಳೆಂತಾ ಶಬ್ದಂ ॥
ರ್ಥೋಮಂ ತೂಷ್ಣೀಂ ಸುಖದೊಳ್ ।
ದೋಷಾರ್ಥ ದ್ವಯದೊಳೆಂ ಪ್ರಯೋಗಿಸೆ ಪಡೆಗುಂ ॥ ೧೦೯ ॥

ಅಹಹ ವಿಷಾದಾರ್ಥದೊಳೆಂ ।
[ತಹಹ ಮದುಂ] ವಿಸ್ಮಯಾರ್ಥದೊಳೆ ಮನುಸರಿಕುಂ ॥
ಸಹಸಾ ಶಬ್ದಂ ವರ್ತಿಕು ।
ಮಹೇತು ತತ್ಕಾಲ ಮೆಂಬಿವೆರಡರ್ಥದೊಳೆಂ ॥ ೧೧೦ ॥

ಉದರ ಶಿರೋವಚನಂ ಕಂ ।
ತ್ರಿದಿವಾಪರಲೋಕವಾಚಕಂ ಸ್ವರ್ ಶಬ್ದಂ ॥
ಸದೃಶಕ್ಕೆ ಪ್ರತಿಪದ ವೀಪ್ಸಾ ।
ರ್ಥದಾಯಕಂ ಪ್ರತಿ ಕು ಕುತ್ಸಿತೇಷದ್ವಚನಂ ॥ ೧೧೧ ॥

ಅತಿಶಯ ಲಂಘನವಾಚಕ ।
ಮತಿಶಬ್ದಂ ಖೇದ ಹರ್ಷ ವಿಸ್ಮಯವಚನಂ ॥
ಬತ ಶಬ್ದಂ ನಿರ್ನೀತ ।
ಪ್ರತಿನಿರ್ದೇಶದ್ವಿತಯವಾಚಕಂ ನಿರ್ ಶಬ್ದಂ ॥ ೧೧೨ ॥

ಕಂ॥ ಆರಂಭಮಂಗಳಾದಿಯೊ।
ಳೋರಂತೋಂಕಾರಮಂತೆ ಹಂತೋಕ್ತಿ ವಚಃ ॥
ಪ್ರಾರಂಭೆ ಹರ್ಷದೊಳ್ ಮ।
ತ್ತಾರಾದ್ದೂರಾಂತಿಕಾರ್ಥದೊಳ್ ವರ್ತಿಸುಗುಂ ॥ ೧೧೦ ॥

ಇತಿ ಹೇತು ಸಮಾಪ್ತಿಗಳೊಳ್।
ವಿತರ್ಕ ನಿಶ್ಚಿತ ಸಮಾಖ್ಯೆಯೊಳ್ ನೂನಂ ಸಾಂ॥
ಪ್ರತ್ನಮುಚಿತ ವರ್ತಮಾನ।
ದ್ವಿತಯದೊ ಳಭ್ಯುದಯತಾದಿಯೊಳ್ ತಾಂ ನಾಮಂ ॥ ೧೧೩ ॥

ಪ್ರಾಕ್ತನರಪ್ಪ ಪುರಾತನ।
ರುಕ್ತಿ ಕ್ರಮದಿಂದಿವೆಲ್ಲನೆಗಟ್ಟಿದಮದೇವಂ ॥
ಯುಕ್ತಿ ನಿಮಿತ್ತಂ ಕೆಲ ಕೆಲ।
ವುಕ್ತಾನುಕ್ತ ಪ್ರಭೇದ ಶಬ್ದಗಣಂಗಳ್ ॥ ೧೧೪ ॥

ಶಿಪಿವಿಷ್ಟ ನೆನಲ್ಪಡುಗುಂ।
ಕಪರ್ದಿಯುಂ ಬಭ್ರು ವೆನಿಕು ವಚ್ಯ್ಯುತನುಂ ವಿ॥
ಷ್ಟಪಗುರು ವೆನಿಸುಗು ವಜನುಂ।
ತಪಸ್ವಿ ಯೆನಿಕುಂ ಕೃಪಾನುಕಂಪ್ಯಾತ್ಮಕನುಂ ॥ ೧೧೫ ॥

ಸುರಸಂಜ್ಞಿಕಮಾಲಯಮುಂ।
ಪುರುಷಂ ತಾನಾತ್ಮ (ನುಂ) ವಿತಾನಂ ಕ್ರತುವುಂ ॥
ಶರಣಂ ಪರಿರಕ್ಷಕನುಂ।
ಶರೀರ ಮೆನಿಕುಂ ವಿರೂಢವಂಶಾಂಕುರಮುಂ ॥ ೧೧೬ ॥

ಕಣ ಮಕ್ಕುಂ ಧಾನ್ಯಾಂಶ[ಮು]।
ಮಣು ವಕ್ಕು ವ್ರೀಹಿಭೇದ(ಮುಂ) ಮಂತ್ರಾಖ್ಯಂ ॥
ಮಣಿಬಂಧ ದೋಷಮಂಮಾ।
ರಣಮಂದುಮಂ ಗಣಿಕೆ ಯೆಂಬುದಕ್ಕುಂ ಪೆಸರಿಂ ॥ ೧೧೭ ॥

ಕಂ॥ ಪಾತ್ರಂ ಕೂಲಾಂತರಮುಂ ।
ಪಾತ್ರಂ ಸೀತಾಗ್ರಮುಂ ಪವಿತ್ರಂ ಕುಶಮುಂ ॥
ಮಿತ್ರಂ ರವಿಯುಂ ಕಮಠಮ ।
ಮತ್ರಮು ಮಕ್ಕುಂ ಕಳತ್ರ ನಾಮಂ ಕಟಿಯುಂ ॥ ೧೧೮ ॥

ಮೃತಮೆನೆ ಪಡೆಗುಂ ತಾಂ ಯಾ ।
ಚಿತಮುಂ ಮತ್ತಮೃತ ಶಬ್ದಮುಂ ಪಡೆಗು ಮಯಾ ॥
ಚಿತಮುಂ ತತ ಮಕ್ಕುಂ ವಿ ।
ಸ್ತೃತಮುಂ ಗರ್ಜಿತಮು ಮೆನಿಕು ಮುನ್ಮದಕರಿಯುಂ ॥ ೧೧೯ ॥

ಮಾನದೊಳಂ ವಾರ್ಷಂ ನೃಪ ।
ಸೇನೆಯೊಳಂ ದಂಡ ಮಶನಿಯೊಳ ಮುಳ್ಳ ಯರ ॥
ಸ್ಥಾನದೊಳಂ (ಪತ್ತಿ)ಸಂ ।
ಖ್ಯಾನದೊಳಂ ಪಙ್ತಿ ಯೆಂಬುದನುಗತ ಮಕ್ಕುಂ ॥ ೧೨೦ ॥

ಸ್ಥಪತಿಧ್ವನಿ ವರ್ಧಕಿಯೊಳ ।
. . . ರತ್ನದೊಳ್ಪ್ರಮಾಶಿತಂ ಭವರುಂ? ॥
ವ್ಯಪದೇಶದೊಳಂ ಕ್ಲೀಬಾ ।
ಖ್ಯೆ ಪರಾಕ್ರಮ ಮಿಲ್ಲದಾತನೊಳ್ ವರ್ತಿಸುಗುಂ ॥ ೧೨೧ ॥

ಪರಿಣಾಹದೊಳಂ ಪ್ರಸ್ಥಂ ।
ಪರಿಪಾಳಿಯೊಳಂ ಕ್ರಮಂ ವಿತರ್ಕಸಮಾವಿ ॥
ಷ್ಕರಣದೊಳಂ (ಬೆರ್ಚು) ಹರಿ ।
ತ್ತರುಣ ತೃಣಾಖ್ಯೆಯೊಳ ಮಱಗೆ ಸಾಧಕಮಕ್ಕುಂ ॥ ॥ ೧೨೨ ॥

ಸವ್ಯಂ ತಾಂ ದಕ್ಷಿಣದೊ ।
ಳಪವ್ಯಾಜಂ ಪಟಳ ಮೆಂಬು (ದದು) ನಿಚಯದೊಳಂ ॥
ಭವ್ಯಂ ದ್ರವ್ಯಾತ್ಮಕದೊಳ ।
ಮವ್ಯಕ್ತಮೆನಿಪ್ಪುದಕ್ಕು ಮಪ್ರಾಜ್ಞೆಯೊಳಂ ॥ ೧೨೩ ॥

ಕಂ॥ ಪರಗುಣದೊಳಸಹನಂ ಮ ।
ಚ್ಚರ ಮೆನಿಕುಂ ಧನಿಕನಾಗಿಯುಂ ಕುಡದವನುಂ ॥
ತ್ವರಮಾಣನುತ್ಸುಕಂ ಸಾ ।
ರ್ಥರತನುಮೆನೆ ನೆಗಳ್ಗಿ ಮಂತೆ ಭಾವಾರ್ಥದೊಳಂ ॥ ೧೨೪ ॥

ಅಕ್ಕರ॥
ಕ್ರೂರನವನೆನಿಪನುಂ ನಿಸ್ತ್ರಿಂಶನೆನಿಸುಗುಂ ಬಾಣಮುಂ ಕಿಂಸನುಂ ನಾಮಧೇಯಂ ।
ವಾರವಾಣಮುಂ ಚೋಳಕಮುಂ ತಾನಿದು ಮಂದನಱಿಗೆ ಸ್ವೇದಮುಂ ॥
ತಾರಂ ಮುಕ್ತಾಗುಣಕ್ಕಂ ಪರ್ಯಾಯಂ ಮೃಗಮು ಮಂತದು ರೂಪ್ಯಶಬ್ದವಾಚ್ಯಂ ।
ದ್ವಾರಮಾತ್ರಮಪ್ಪುದುಮೆನೆ ಪಡೆಗುಂ ದ್ವಾರಮುಂ ಪ್ರತೀಹಾರ ಮೆಂಬುದಕ್ಕುಂ ॥ ೧೨೫ ॥

ಕಂ॥ ಕೃತಮೆಂಬುದು ಪರ್ಯಾಪ್ತಂ ।
ಹುತಾಶನತ್ರಿತಯನಾಮಕಂ ತ್ರೇತೆ ಚಿ(ಕಿ) ॥
ತ್ರಿತವಚನಂ ದ್ವಾಪರಮು ।
ನ್ವಿತ [ಪಾಪಂ] ಕಲಿ ಯುಗಕ್ಕ ಮಿವೆ ಪೆಸರಕ್ಕುಂ ॥ ೧೨೬ ॥

ಒಡನೊಂದೆ ವಾಕ್ಯದೊಳ್ ನುಡಿ ।
ವೊಡೆ ರವಿಶಶಿಗಳ್ಗೆ ಪುಷ್ಪದಂತಾಖ್ಯೆಯೊಡಂ ॥
ಬಡೆಗುಂ ಮಾತೃಕೆಯುರ್ಕಳ್ ।
ಪಡೆವರ್ ದೊರೆವೆತ್ತ ರೇವತೀಸಾಹ್ವಯಮುಂ ॥ ೧೨೭ ॥

ಪಿತೃಶಬ್ದಮೊಂದೆ ಮಾತಾ ।
ಪಿತೃ ವಚನಂ ಜಾಮಿಕುಳವಧೂ ಸ್ವಸೃನಾಮಂ ॥
ಸತಿಗಂ ಸೊಸೆಗಂ [ಸಜ್ಜನ ।
ಸತಿಗಂ] ವಧು ವೆಂಬುದಕ್ಕುಮಂತಭಿಧಾನಂ ॥ ೧೨೮ ॥

ಸರಿದಂಭೋನಿಧಿಗಳು ಮಂ ।
ತೆರಡಱಿಕೊಳಂ ಸಿಂಧುಶಬ್ದ ಮುಕ್ತಾಖ್ಯೆಯೊಳಂ ॥
ಸುರಭಿಯೊಳಂ ಗೋಶಬ್ದಂ ।
ಕರಿ ಕರಿಣಿಗಳೊಳ್ ಕರೇಣುಶಬ್ದಂ ನೆಗಳ್ಗುಂ ॥ ೧೨೯ ॥

ಕಂ॥ ಶಯನಾಶ(ನ)ವಮಾ ಸೀರಂ ।
ವಿಯದವನಿದ್ವಿತಯಿ ರೋದಮುಂ ರೋದಸಿಯುಂ ॥
ನಿಯತಂ ಕಶಿಪು ವೆನಿಪ್ಪು ।
ಕ್ರಿಯೊಳೊಳಕೊಂಡಿರ್ಕು ಮಶನವಸನ ಮಿವೆರಡುಂ ॥ ೧೩೦ ॥

ಯಯು ವೆಂಬುದಶ್ವಮೇಧದ ।
ಹಯಮುಂ ಸಾಮಾನ್ಯಹಯಮು ಮಕ್ಕುಂ ಸಸ್ಯೋ ॥
ರ್ವಿಯೊಳಂ ಕೇವಳಮಪ್ಪು ।
ರ್ವಿಯೊಳಂ ಸಲೆ ನೆಗೞ್ಗು ಮುರ್ವರಾಶಬ್ದಂ ತಾಂ ॥ ೧೩೧ ॥

ಧವಳೆ ವಸನಂಗಳೊಳವಿತ ।
ರ ವಸ್ತ್ರಸಾಧಾರಣ ವಿವಾದೊಳಂ ? ತಾಂ ॥
ವ್ಯವಹರಿಕು ಮಂಶುಕಾಖ್ಯಾ ।
ನವದಂ ಕೆಲರುತ್ತರೀಯ ವಾಚಿಯು ಮೆಂಬರ್ ॥ ೧೩೨ ॥

ಘನಸಾಮಾನ್ಯಂ ಘನ ವಪ ।
ಘನಮೆನೆ ನೆಗೞ್ಗುಂ ಘನಾಘನಂಗಳೆ ಮತ್ತಂ ॥
ಮುನಿವಾಕ್ಯದಿಂ ಘನಾಘನ ।
ವೆನಿಕುಂ ಪ್ರಾಚೀನಬರ್ಹಿಯುಂ ಮದಕರಿಯುಂ ॥ ೧೩೩ ॥

ನೆಗೞ್ಗುಂ ಜಘನನಿತಂಬಾ ।
ಖ್ಯೆಗಳಬ (ಲಾ) ಪೂರ್ವಪರಕಟೀಭಾಗದೊಳಂ ॥
ನೆಗೞ್ಗುಂ ಸೌದಾಮಿನಿ ಯೆನಿ ।
ಪಗಿರೆಪ(ವಿ)ದ್ಯುದ್ವಿಶೇಷ ಸಾಮಾನ್ಯದೊಳಂ ॥ ೧೩೪ ॥

ಪ್ರಾಚೀನ ಬರ್ಹಿ ಕೇಳ್ವಂ ।
[ವಾಚಸ್ಪತಿ]ಪೇೞ್ವೆ ನೆನೆಯು ಮಂತವರ್ಗಮದೇಂ ॥
ಗೋಚರಮೆನೆ ಕವಿ ಕಾಣ್ಗುಮೆ ।
ನೀಚ ಜನಪ್ರಕೃತಿ ಶಬ್ದಪಾರಾಂಗಣಮಂ ॥ ೧೩೫ ॥

ಮ॥ [1] ಅತಿಬಾಣಂ ಹರಿಯಂತಧಃಕೃತಮಯೂರಂ ತಾರಕಾರಾತಿಯಂ ।
ತತಿ ಮಾಘಂ ಶಿಶಿರಾಂತ್ಯದಂತೆ[ಸುರಪ ಪ್ರೋಚ್ಚಂಡ ಕೋದಂಡದಂ ॥
ತೆ ತಿರೋಭೂತ] ಗುಣಾಢ್ಯ ನಬ್ಜಮ[2]ನದಂತಾವಿರ್ಭವದ್ದಂಡಿ ಭಾ ।
ರತದಂತಾತ್ತ ಧನಂಜಯ್ಯಿ[ಕವಿಭವಂ]ವಾಗ್ಗುಂಭದೊಳ್ ನಾಕಿಗಂ ॥ ೧೩೬ ॥[3]

ಇಂತು

ನಾನಾರ್ಥವರ್ಗಂ

—ಗದ್ಯ—

ಇದು ಸಮಸ್ತ ಭುವನಜನ ಸಂಸ್ತೂಯಮಾನ ಕವಿತಾ ಗುಣೋದಯಂ
ಶ್ರೀ ನಾಗವರ್ಮವಿರಚಿತ ಮಪ್ಪ

ವಸ್ತುಕೋಶದೊಳ್

ನಾನಾರ್ಥಕಾಂಡಂ

[3a] ನಾನಾರ್ಥಧ್ವನಿನಂ ಸ್ವೋತಮರ್ದಿರ ರೆ ತಿದ್ದಿಕೊಂಡು ಪೇಟ್ದಿಂ ॥
ಸ್ಥಾನಿಯ ಪ್ರವಿವಂಸಾ ನಾರಿವಿಳದಳಂಕ್ರಿಯಾ ಕಳಾಪ

ಇತಿ ನಾನಾರ್ಥವರ್ಗಃ

—ಶ್ರೀ ನಾಗವರ್ಮನಿಘಂಟು ಸಮಾಪ್ತಂ—[4]

---

(1) ಜಿತ(ಪಾಠಾಂತರಂ)

(2) ಭವನ(ಪಾ)

(3) ಈ ಪದ್ಯವು ಛಂದೋಂಬುಧಿಯಲ್ಲಿಯೂ ಇರುವುದು.

(3a) ಈ ಪದ್ಯವು ತುಂಬಾ ಅಶುದ್ಧವಾಗಿದೆ, ತ್ರಿಪದಿಯಾಗಿರಬಹುದು.

(4) ೮೦೦—ಎಂಟುನೂರು ಪದ್ಯಗಳು, ಒಟ್ಟು ೧೭ ಹದಿನೇಳು ವರ್ಗ. ಎಂದು ಮೂಲದಲ್ಲಿದೆ.

# ಪರಿಶಿಷ್ಟಂ.

## ಈ ಕೋಶದಲ್ಲಿಯ ಶಬ್ದಗಳ ಅಕಾರಾದ್ಯನುಕ್ರಮಣಿಕೆಯ ಪಟ್ಟಿ



(ದೇ) ಇದು ದೇಶ್ಯ ಎಂಬ ಶಬ್ದದ ಕಿರಿಯರೂಪವು

| | | |
|---|---|---|
| ಅಜಳೆ | ಅ ಭೂ | ೫ |
| ಅಜಸ್ರಂ | ಸಾ ವಿ ಣ | ೬೩ |
| ಅಜಾಜಿ | ಅ ವೃಕ್ಷಾ | ೩೩ |
| ಅಜಾಜೀವ | ಅ ಮನು | ೮೩ |
| ಅಜಾ(ಹ್ವಯ) | ಅ ವೃಕ್ಷಾ | ೩೩ |
| ಅಜಿತ | ಅ ಸ್ವ | ೨೧ |
| ಅಜಿನ | ಅ ದೇಹಾ | ೨೮ |
| ,, | ಅ. ಮನು | ೩೧ |
| ಅಜಿನಪ(ತ್ರಾಹ್ವಯಂ) | ಅ ಮೃಗ | ೧೪ |
| ಅಜ್ಜಿಕೆ(ಕಾ) | ಅ ದಾನ್ಯ | ೪ |
| ಅಜ್ಞಾ | ಸಾ. ವಿ ಣ | ೭ |
| ಅಟನಿ | ಅ ಸಮ | ೧೭ |
| ಅಟವಿ | ಅ ವನ | ೧೫ |
| ಅಟವೀಸಂಭವಂ | ಅ ಧಾನ್ಯ | ೧೯ |
| ಅಟ್ಟ | ಅ ಪುರ | ೬ |
| ಅಟ್ಟಾಳೆ(ಳಾಖ್ಯಂ) | ಅ ಪುರ | ೬ |
| ಅಡೆಗು(ದೇ) | ಅ ದೇಹಾ | ೩೦ |
| ಅಡಿ(ದೇ) | ಅ. ದೇಹಾ | ೨ |
| ಅಡುಗೆಯೊಳಗೆಯುಂ(ಕ) | ಅ ಧಾನ್ಯ. | ೧೨ |
| ಅಣಕ | ಸಾ ವಿ ಣ | ೫೯ |
| ಅಣಮೆಕಿಱಿದು(ದೇ) | ಸಾ ವಿ ಣ | ೫೬ |
| ಅಣಿಮ | ಸಾ ವಿ ಷ್ಯ | ೨೮ |
| ಅಣಿಷ್ಠ | ಸಾ ವಿ ಣ | ೫೬ |
| ಅಣು | ನಾನಾ | ೧೧೭ |
| ,, | ಸಾ ವಿ ಣ | ೫೬ |
| ಅಣುತ್ವ | ಸಾ ವಿ ಷ್ಯ | ೨೮ |
| ಅಣಂ(ದೇ) | ನಾನಾ | ೬೩ |
| ಅತನು | ಅ ಸ್ವ. | ೨೮ |
| ಅತನುಹರ | ,, | ೧೩ |
| ಅತಲಸ್ಪರ್ಶ | ನಾನಾ | ೬೪ |
| ಅತಸಿ | ಅ. ಧಾನ್ಯ. | ೧೮ |
| ಅತಳೆ | ಅ. ಸಂ | ೫ |
| ಅತಾಂತಂ | ಸಾ ವಿ. ಷ್ಯ. | ೩೪ |
| ಅತಿ(ಶಬ್ದಂ) | ನಾನಾ. | ೧೧೨ |
| ಅತಿಕೃಚ್ಛ್ರಗಹನ | ,, | ೨೯ |
| ಅತಿಕೃಪಣ | ಸಾ ವಿ ಣ | ೧೯ |
| ಅತಿಕ್ರೂರಕರ್ಮ | ಸಾ. ವಿ. ಣ | ೬ |
| ಅತಿಘನ | ಸಾ ವಿ ಣ | ೩೯ |
| ಅತಿತ್ರಾಸಮುದಾದೇಶದೊಳ್ | ನಾನಾ | ೩೪ |
| ಅತಿಥಿ | ಸಾ. ವಿ. ಣ | ೨೫ |
| ಅತಿಪ್ರಿಯವಾದಿ | ಸಾ ವಿ ಣ | ೧೮ |
| ಅತಿಬಾಣಂ (ಜಿತಬಾಣಂ) | ನಾನಾ | ೧೩೬ |
| ಅತಿವಾಘ | ನಾನಾ | ೧೩೬ |
| ಅತಿಮೇಧ್ಯ | ಸಾ ವಿ ಣ | ೬೧ |
| ಅತಿಲಾಲಸಕ | ಸಾ ವಿ ಣ | ೭ |
| ಅತಿವಿಖ್ಯಾತ | ಸಾ ವಿ ಣ | ೪೬ |
| ಅತಿವಿತತಕೀರ್ತಿಗುಣವತ್ಪ್ರತತಿಯವರ್ಣನೆ | ಅ ಭೂಷ | ೩೫ |
| ಅತಿವೇಳೆ | ಸಾ ವಿ ಷ್ಯ | ೧೩ |
| ಅತಿವ್ಯಯಶೀಳೆ | ಸಾ ವಿ ಣ. | ೨೨ |
| ಅತಿವ್ಯಾಕುಳ | ಸಾ ವಿ ಣ | ೬ |
| ಅತಿವಿನಯ ಸಂಭೃತ | ಸಾ ವಿ ಣ | ೨೦ |
| ಅತಿಶಯಲಂಘನವಾಚಕ | ನಾನಾ | ೧೧೨ |
| ಅತಿಶಯಶೋಭಾನ್ವಿತ | ಸಾ ವಿ ಣ | ೫೮ |
| ಅತಿಸ್ಫುಟ | ಸಾ ವಿ ಷ್ಯ | ೧೨ |
| ಅತೀಂದ್ರಿಯ | ಅ ದೇಹಾ | ೨೪ |
| ಅತೀವ | ಸಾ ವಿ ಷ್ಯ | ೩೪ |
| ಅತೀವತ್ವರಿತಂ | ನಾನಾ | ೮೫ |
| ಅತ್ತವಳಂ? | ಸಾ ವಿ ಷ್ಯ | ೨೩ |
| ಅತ್ತೆಯೊಳಂ | ಅ. ಮನು | ೨೪ |
| ಅತ್ಯಂತ | ಸಾ ವಿ. ಷ್ಯ | ೩೪ |
| ಅತ್ಯಂತಘನ | ಅ ಭೂಷ. | ೧೯ |
| ಅತ್ಯಂತದಕ್ಷ | ಸಾ ವಿ ಣ | ೬ |
| ಅತ್ಯಯ | ನಾನಾ | ೯೩ |
| ,, | ಸಾ ವಿ ಷ್ಯ | ೧೭ |
| ಅತ್ಯರ್ಥ | ಸಾ ವಿ ಷ್ಯ | ೩೪ |
| ಅತ್ರಿ | ಅ ಸ್ವ. | ೭೬ |
| ಅತ್ರಿನೇತ್ರಜ | ಅ ಸ್ವ | ೬೮ |
| ಅತ್ಯುತ್ಕಟ | ಸಾ. ವಿ. ಣ | ೪೭ |
| ಅದಭ್ರ | ಸಾ ವಿ. ಣ | ೫೫ |
| ಅದರಾಭಿಪ್ರಾಯ ಸಮಾಹ್ವಯಂ | ನಾನಾ | ೨೭ |
| ಅದರ್ಶನ | ಸಾ ವಿ ಷ್ಯ. | ೨೦ |
| ಅದಿತಿ ತನಯ(ರ್) | ಅ ಸ್ವ | ೩೦ |
| ಅದಿವ್ಯಥನ | ಸಾ. ವಿ ಷ್ಯ. | ೨೪ |
| ಅದುಮೂಱು(ದೇ) | ಅ ಸಮ. | ೮ |
| (ಆರ್ಗಂ) ಅದೃಶ್ಯರ್ | ಅ ಸ್ವ | ೩೧ |
| ಅದ್ಭುತಂ | ಸಾ. ವಿ ಷ್ಯ. | ೨೫ |
| ಅದ್ಭುತಾಲೇಖ್ಯನಾಮ | ನಾನಾ. | ೩೦ |

